ಜಯಕರ್ನಾಟಕ ಗ್ರಂಥಮಾಲೆಯ ಹನ್ನೆರಡನೆಯ ಪ್ರಸ

# ದರಿದ್ರನಾರಾಯಣ

( ಒಂದು ಸಾಮಾಜಿಕ ನಾಟಕ )

ಶ್ರೀರಂಗ

ಬೆಲೆ ಹತ್ತು ಆಣೆ

೧೯೩೩

## ಶ್ರೀರಂಗನ ರಂಗಭೂಮಿ

೧ ಉದರ ವೈರಾಗ್ಯ (ಸಾಮಾಜಿಕ)

೨ ವೈದ್ಯರಾಜ ( ,, )

ಇನ್ನೂ ಅಚ್ಚಾಗದೆ ಇರುವವು.

೩ ವಿರಾಟ ಪುರುಷ ( ,, )

೪ ಅಧಿಕ ಮಾಸ ( ,, )

೫ ಸಂಸಾರಿಗ ಕಂಸ ( ,, )

೬ ಹರಿಜನ್ವಾರ ( ,, )

೭ ಪರಮೇಶ್ವರ ಪುಲಕೇಶಿ (ಐತಿಹಾಸಿಕ).

೮ ನಿರುತ್ತರ ಕುಮಾರ (ಪೌರಾಣಿಕ ಪ್ರಹಸನ).

# ಮುನ್ನುಡಿ

ನನ್ನದೂ ಶ್ರೀರಂಗನದೂ ಪರಿಚಯ. ಒಂದು ದಿನ ಈ ನಾಟಕದ ಸಲುವಾಗಿ ಚರ್ಚೆ ಮಾಡುವಾಗ ಮುನ್ನುಡಿಯನ್ನು ಯಾರು ಬರೆಯಬೇಕೆಂಬ ಮಾತು ಹೊರಟಿತು. ಪುಸ್ತಕವೆಂದಮೇಲೆ ಮುನ್ನುಡಿ ಬೇಕೇಬೇಕು. ನನ್ನಲ್ಲಿ ಅವರಿಗಿದ್ದ ಪ್ರೇಮವೋ, ಈ ನಾಟಕಕ್ಕೆ ಮುನ್ನುಡಿಯನ್ನು ಬರೆಯುವದಕ್ಕೆ ನನಗಿದ್ದ ಅಧಿಕಾರವೋ—ಏನೇ ಇರಲಿ—ನಾನೇ ಇದಕ್ಕೆ ಮುನ್ನುಡಿಯನ್ನು ಬರೆಯಬೇಕೆಂದು ಅವರ ಆಗ್ರಹವಾಯಿತು. ನನಗೂ ತುಂಬ ಸಂತೋಷ. ಶ್ರೀರಂಗನ ನಾಟಕಕ್ಕೆ ಮುನ್ನುಡಿ ಬರೆಯುವವರು ಸಾಮಾನ್ಯರಲ್ಲ.

ಈ ನಾಟಕದಲ್ಲಿಯ ಮುಖ್ಯ ಪಾತ್ರಗಳೆಂದರೆ: ಉಚ್ಚ ಶಿಕ್ಷಣ ಹೊಂದಿ, ಆದರ ಪ್ರವಾಹದಲ್ಲಿ ಸಿಲುಕಿ, ಏನಾದರೊಂದು ಸಾಹಸದ ಕೆಲಸ ಮಾಡಬೇಕು, ಸಮಾಜವನ್ನು ಸುಧಾರಿಸಬೇಕು, ಎಂಬ ದೊಡ್ಡ ತತ್ವಗಳನ್ನು ತಲೆಯಲ್ಲಿ ತುಂಬಿಕೊಂಡು, ಅದನ್ನು ಕಾರ್ಯಕ್ಷೇತ್ರದಲ್ಲಿ ಹೇಗೆ ತರಬೇಕೆಂಬುದು ತಿಳಿಯದೆ ತೊಳಲಾಡುವ ತರುಣರಿಬ್ಬರು: ಶ್ರೀಧರ ಮತ್ತು ಲಲಿತಾ. ಇವರಿಬ್ಬರ ಸಹಾಧ್ಯಾಯಿಯಾದ, ಪರಿಚಯದವನಾದ, ತನ್ನ ಸ್ಥಿತಿಯನ್ನರಿತು ಇಲ್ಲದ ಸಾಹಸಕ್ಕೆ ಕೈ ಹಾಕದೆ, ಮಾಡಬೇಕಾದುದನ್ನು ಆಡಿ ತೋರಿಸದೆ ಮಾಡಿ ತೋರಿಸುವ, ಹಸನ್ಮುಖಿಯಾದ ತರುಣನಿನ್ನೊಬ್ಬ; ಕೊಂಕ. ಇನ್ನುಳಿದವರೆಂದರೆ: ತಮ್ಮ ಸ್ಥಿತಿಯು ಕೆಡುವದನ್ನು ಕಂಡು ಏನು ಮಾಡಬೇಕೆಂಬುದು ಮಾತ್ರ ತೋಚದೆ ಪೇಚಾಡುವ ಜೋಯಿಸ, ಕಾಳಪ್ಪ, ಸೆಟ್ಟಿ; ತಮ್ಮ ಸ್ಥಿತಿಯನ್ನರಿತು ಹಿರಿಯತನದ ದರ್ಪದಿಂದ, ಯುಕ್ತಿಪ್ರಯುಕ್ತಿಗಳಿಂದ ತಮ್ಮದನ್ನೇ ಸಾಧಿಸುವ ತಂದೆಗಳಿಬ್ಬರು; ಇವರು ನಾಟಕದ ಪೋಷಕ ಪಾತ್ರಗಳು.

ಇನ್ನು ನಾಟಕದ ವಸ್ತುವೆಂದರೆ ತಮ್ಮ ವ್ಯವಹಾರ ಉದ್ಯಮಗಳು ತಮ್ಮ ಕಣ್ಣ ಮುಂದೆಯೇ ಕರಗಿ ನೀರಾಗಿ ಹೋಗುವದನ್ನು ಕಂಡು, ಅದಕ್ಕೆ ಉಪಾಯವನ್ನು ಕಾಣದೆ 'ಮುಂದೇನು'? ಎಂಬ ಸೆಟ್ಟಿ, ಕಾಳಪ್ಪ, ಜೋಯಿಸರ ಗೋಳು. ಸಾಲೆ–ಕಾಲೇಜು ಮುಗಿಸಿ ಉಚ್ಚ ಶಿಕ್ಷಣ ಹೊಂದಿ ಏನೇನೋ ದೊಡ್ಡ ದೊಡ್ಡ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡು ಮನಸ್ಸಿನಲ್ಲಿದ್ದುದನ್ನು ಮಾಡುವದಕ್ಕೆ ಧೈರ್ಯ ಸಾಲದೆ, ಮುಂದೇನು ಎಂಬ ಶ್ರೀಧರ, ಲಲಿತೆಯರಗೋಳು. ಪಾಪ. ಅವರದಷ್ಟೇ ಏಕೆ? ಮುಂದೇನು ಎಂಬ ಇಂದಿನ ನಮ್ಮೆಲ್ಲರ ಗೋಳು. ಹೀಗಾಗಲು ಕಾರಣಗಳೇನು ? ಇವನ್ನು ಕಂಡು ಹಿಡಿದು ದೂರ ಮಾಡಿದಲ್ಲಿ ನಮ್ಮ ಅವಸ್ಥೆ ಸುಧಾರಿಸಬಹುದೇ ? ಎಂಬ ವಿಚಾರವನ್ನು ಈಗ ನಾವೆಲ್ಲರೂ ಮಾಡಬೇಕಾಗಿದೆ.

ಇಂದಿಗೆ ಸುಮಾರು ೧೫೦ ವರ್ಷಗಳ ಹಿಂದೆ ಜಗತ್ತಿನಲ್ಲಿ ಹೊಸ ಶೋಧಗಳಾಗಿ ವಸ್ತುರಚನಾ ಕ್ರಿಯೆಯಲ್ಲಿ ಕ್ರಾಂತಿಯಾಯಿತು. ಮನುಷ್ಯಬಲಕ್ಕೆ ಪ್ರತಿಯಾಗಿ ಯಂತ್ರಬಲವು ಉಪಯೋಗದಲ್ಲಿ ಬಂದಿತು. ಆ ಸಮಯದಲ್ಲಿ ನಮ್ಮೊಳಗೆ ಇನ್ನೂ ಹಿಂದುಸ್ತಾನವು ಒಂದೇ ದೇಶವೆಂದೂ ನಾವೆಲ್ಲರೂ ಒಂದೇ ದೇಶದವರೆಂದೂ, ಹಿಂದುಸ್ತಾನದ ಏಳ್ಗೆಯೆಂದರೆ ನಮ್ಮೆಲ್ಲರ ಏಳ್ಗೆಯೆಂದೂ ಭಾವನೆಯೇ ಇರಲಿಲ್ಲ. ಚಿಕ್ಕಪುಟ್ಟ ರಾಜ್ಯಗಳನ್ನು ಕಟ್ಟಿಕೊಂಡು ನಮ್ಮ ನಮ್ಮೊಳಗೇ ಬಡಿದಾಡಿ ಎಲ್ಲರೂ ಕೂಡಿ ಕಡೆಗೆ ರಾಜ್ಯವನ್ನು ಕಳಕೊಂಡದ್ದಾಯಿತು. ಕಾಲಾಂತರದಲ್ಲಿ ಅರಾಜಕತೆಯು ಮರೆಯಾಗಿ ಎಲ್ಲ ಕಡೆಗೂ ಶಾಂತತೆ ನೆಲೆಸಿ ಸಂಸಾರ ಚಕ್ರವು ಸುಖವಾಗಿ ನಡೆದು ವಿಚಾರಕ್ಕೆ ಆಸ್ಪದ ದೊರೆಯಲು ಹೊಸ ಕಲ್ಪನೆಗಳೂ ಹೊಸ ಭಾವನೆಗಳೂ ನಮ್ಮಲ್ಲಿ ಹುಟ್ಟ ತೊಡಗಿದವು.

ಆದರೆ ಈ ಅವಧಿಯಲ್ಲಿ ನಮ್ಮ ಸಲುವಾಗಿ ಏರ್ಪಾಡಾದ ಶಿಕ್ಷಣ ಪದ್ಧತಿಯಿಂದಲೂ, ಧೋರಣೆಯಿಂದಲೂ, ನಮ್ಮ ಶೀಲ ಸ್ವಭಾ

ವಗಳು ಪರಿವರ್ತನ ಹೊಂದಿದವು. ಪರರಾಷ್ಟ್ರಗಳು ತಮ್ಮ ಉದ್ಯಮಗಳನ್ನು ಹೊಸ ಹೊಸ ಶೋಧಗಳಿಂದ ಬಲಪಡಿಸಿದರು. ಯಂತ್ರ ಬಲದ ಮುಂದೆ ಮನುಷ್ಯ ಬಲವು ಕುಗ್ಗಿತು. ದಿನೇ ದಿನೇ ನಮ್ಮ ಉದ್ಯಮಗಳು ಕುಂದಿ, ಕಡೆಗೆ ಕಂದಿ ಹೋದವು. ನಮ್ಮ ಸಮಾಜ ಘಟನೆಯೂ ಬದಲಾಯಿತು. ಕೃಷಿ, ಕಾರಕೂನಿ ಇವೆರಡು ಮಾತ್ರ ನಮ್ಮ ಪಾಲಿಗುಳಿದವು. ಆ ಕೃಷಿಯು ಕೂಡ ಇಂದು ಹೀನಾವಸ್ಥೆಯಲ್ಲಿದೆ. ಜನಸಂಖ್ಯೆ ಕಡಿಮೆ ಇದ್ದು, ಬೇರೆ ಉದ್ಯಮಗಳು ಬೆಳಬೆಳಗುತ್ತಿದ್ದಾಗ್ಗೆ ಕೃಷಿಯಲ್ಲಿ ಲಾಭವಿತ್ತು. ಆದರೆ, ಮುಂದೆ ಬೆಳೆದ ಜನಸಂಖ್ಯೆಯ ಭಾರವು ಕೃಷಿಯ ಮೇಲೆಯೇ ಬಿದ್ದಿತು. ಹೀಗಾಗಿ ಅದರಲ್ಲಿಯ ಲಾಭವು ಕೂಡ ಹಂಚಿ-ಹರಿದು ಹೋಯಿತು.

ಯಂತ್ರ ಪ್ರಾಬಲ್ಯದಿಂದ ಹಳ್ಳಿಯ ಕಮ್ಮಾರ, ನೂಲುವವ, ಬಡಿಗ ಮೊದಲಾದವರ ವ್ಯವಸಾಯಗಳು ನಿಂತು ಹೋದವು. ಅವು ನಿಂತು ಹೋದದ್ದರ ಕಾರಣವೇನು? ಅದಕ್ಕೆ ಉಪಾಯವೇನು? ಅವುಗಳ ಬದಲು ಮತ್ತೇನಾದರೂ ಮಾಡಬಹುದೋ? ಇದೆಲ್ಲವನ್ನೂ ವಿಚಾರಿಸಲು ಶಕ್ತರಿದ್ದವರಲ್ಲಿ, ಕೆಲವರು ಕಾರಕೂನಿಯಲ್ಲಿ, ಕೆಲವರು ಬೇರೆ ಮಾರ್ಗಗಳಲ್ಲಿ, ತಮ್ಮ ಸ್ವಂತದ ಹೊಟ್ಟೆಗಾಗಿ ತೊಳಲುತ್ತಿರುವರು. ಉಳಿದವರಿಗೋ? ಇದೆಲ್ಲವೂ ಅವರವರ ಪೂರ್ವಜನ್ಮದ ಕರ್ಮ. ನಮ್ಮ ಏಳ್ಗೆಯಾಗಬೇಕಾದರೆ ಪೂರ್ವಕರ್ಮ ಪ್ರಾಬಲ್ಯವನ್ನು ಪ್ರತಿಕ್ಷಣಕ್ಕೂ ಸಾರುವ ನಮ್ಮ ಧರ್ಮಪ್ರಭಾವವು ಕಡಿಮೆಯಾಗಲಿಕ್ಕೇ ಬೇಕು. ಮನುಷ್ಯನ ಸಾಹಸಕ್ಕೆ ಯಾವಗೂ ಮಿರಿಲ್ಲವೆಂಬ ಹಟವನ್ನು ಸಾಧಿಸುವ ಹೊಸ ಧರ್ಮವನ್ನು ಶೋಧಿಸಬೇಕು. ಭೂತಕಾಲದ ಕರ್ಮಪಿಶಾಚಿಯ ಕೇಡೆಯಲ್ಲಿ, ಭವಿಷ್ಯದ ಭೂತವನ್ನು ಮರೆತು ಬಿಟ್ಟ ನಮ್ಮಲ್ಲಿ, ಸಾಹಸವೂ ಸಹನಶಕ್ತಿಯೂ ಬೇಕು. ನಮ್ಮಲ್ಲಿ ಮನೆ ಮಾಡಿಕೊಂಡ ಹೇಡಿತನವೂ, ಪರಾವಲಂಬನವೂ ನಾಶವಾಗಬೇಕು.

ಇದನ್ನರಿತು ಇಲ್ಲಿಯುವರೆಗೆ ನಮಗೆ ಧರ್ಮವನ್ನು ಸಾರಿದ ಗುರುಗಳೇ, ಆ ಧರ್ಮದಿಂದಾದ ಅನಾಹುತಗಳನ್ನೂ ಸ್ಮರಿಸಿ, ರಾಷ್ಟ್ರದಲ್ಲಿ ಹೊಸ ಶಕ್ತಿಯೂ, ಹೊಸ ಚೈತನ್ಯವೂ ಹುಟ್ಟುವಂತೆ ಈ ಹೊಸ ಧರ್ಮವನ್ನು ಸಾರಬೇಕು. ನಮ್ಮಲ್ಲಿ ಇಂದಿಗೂ ಧರ್ಮ–ಗುರುಗಳ ವಿಷಯವಾಗಿ ವಿಲಕ್ಷಣವಾದ ವಿಶ್ವಾಸವಿದೆ. ಅವರು ಹೇಗೇ ಇರಲಿ, ಗುರುಗಳಲ್ಲವೇ ? ಅವರ ತಪ್ಪು ತೋರಿಸುವುದೆಂದರೆ ಗುರುದ್ರೋಹವಲ್ಲವೇ ? ಎಂಬುದು ನಮ್ಮ ದೃಢಭಾವನೆ. ಕುಶಾಗ್ರ ಬುದ್ಧಿಯ ಈ ಧರ್ಮಗುರುಗಳು ಇಲ್ಲಿಯ ವರೆಗೆ ಈ ಭಾವನೆಯ ದುರುಪಯೋಗ ಮಾಡಿರುವರು. ಇದನ್ನು ಒಪ್ಪಿಕೊಂಡಲ್ಲಿ, ಇವರನ್ನು ಹೊಡೆದೋಡಿಸಿ, ಸಜ್ಜನರನ್ನೇಕೆ ಧರ್ಮಗುರುಗಳನ್ನಾಗಿ ಮಾಡಬಾರದೆಂಬುದು ಸಹಜವಾಗಿ ಧ್ವನಿತವಾಗುತ್ತದೆ. ಆದರೆ ಇದ್ದುದನ್ನು ಹಾಳುಮಾಡಿ, ಹೊಸತನ್ನು ಅದರ ಸ್ಥಾನದಲ್ಲಿ ನಿರ್ಮಾಣ ಮಾಡುವದು ಬಹುಕಷ್ಟ. ಇದ್ದುದನ್ನು ಹಾಳುಮಾಡುವಷ್ಟರಲ್ಲಿ ನಮ್ಮ ಬುದ್ಧಿ–ಬಲಗಳೆರಡೂ ನಷ್ಟವಾಗಿ, ಹೊಸತನ್ನು ನಿರ್ಮಾಣ ಮಾಡುವ ಸೆಸವೇ ನಮ್ಮಿಂದ ಹಾರಿ ಹೋಗುವ ಭಯವಿದೆ. ಆದ ಕಾರಣ ಇದ್ದ ಧರ್ಮಗುರುಗಳಲ್ಲಿಯೇ ಹೊಸ ಬುದ್ಧಿಯ ಪ್ರೇರಣೆಯಾಗುವಂತೆ ನಮ್ಮ ಆಚಾರ ವಿಚಾರಗಳನ್ನು ಸರಿಪಡಿಸುವದು ಹೆಚ್ಚು ಸಮಂಜಸವಾಗಲಿಕ್ಕಿಲ್ಲವೇ ?

ಇದನ್ನಾದರೂ ಹೇಳುವವರಾರು ? ಇದಕ್ಕೆ ಒಂದೇ ಒಂದು ಸುಲಭವಾದ ಉತ್ತರವಿದೆ. ನಾನು, ನೀವು. ಇದಕ್ಕಾಗಿ ಪ್ರತಿಯೊಬ್ಬನೂ ತನ್ನ ಬುದ್ಧಿಗೆ ತೋಚಿದಂತೆ ಮಾಡಿ ತೋರಿಸುವ ಶಕ್ತಿಯನ್ನು ಸಾಧಿಸಬೇಕು. ಈ ಸಾಧನದಲ್ಲಿ ಹಿತವಾದದ್ದಷ್ಟೇ ಸಹಜವಾಗಿ ಬೆಳಗಿ, ಅಹಿತವಾದದ್ದು ಮುಳುಗಿ ಹೋಗುವದು.

ನಮ್ಮ ದೇಶದಲ್ಲಿ ನಮ್ಮ ಉದ್ಯಮಗಳಿಗೆ ಬೇಕಾಗುವ ಎಲ್ಲ ವಸ್ತುಗಳ ವಿಪುಲ ಸಂಚಯವಿದೆ. ಹತ್ತಿ, ನಾರು, ಕಬ್ಬಿಣ, ಕಲ್ಲೆಣ್ಣೆ,

ಕಲ್ಲಿದ್ದಲಿ, ಕಟ್ಟಿಗೆ, ಎಣ್ಣೆಯು ಕಾಳು ಮೊದಲಾದವುಗಳಿಗಾಗಿಯೂ, ಕೂಲಿಕಾರರಿಗಾಗಿಯೂ ನಮಗೆ ಪರಕೀಯರ ಅವಲಂಬನ ಬೇಕಾಗಿಲ್ಲ. ಕಲ್ಲಿದ್ದಲಿಯ ಖಣಿಗಳಿಲ್ಲದಿದ್ದಲ್ಲಿ ಜಲಪಾತಗಳಿಂದ ಅಲ್ಲಲ್ಲಿಗೆ ವಿದ್ಯುಚ್ಛಕ್ತಿಯನ್ನು ಹುಟ್ಟಿಸಿ, ಬೇಕಾದಂತೆ ಉಪಯೋಗಿಸಿಕೊಳ್ಳಲು ಅನುಕೂಲಗಳಿವೆ. ಇವುಗಳ ಯೋಜನೆಯಿಂದ ಉದ್ಭವಿಸುವ ಉದ್ಯೋಮಗಳಿಗೆ ಹಿಂದುಸ್ಥಾನದ ೩೫ ಕೋಟಿ ಜನಸಂಖ್ಯೆಯು ಪೇಟೆಯೇ ಸಾಕಷ್ಟಿದೆ. ಇದರಿಂದ ಇಂದು ಪ್ರತಿಯೊಬ್ಬನ ಮುಂದಿದ್ದ 'ಮುಂದೇನು?' ಎಂಬ ಪ್ರಶ್ನೆಯು ಸಹಜವಾಗಿ ದೂರಾಗುವಂತಿದೆ.

ಆದರೆ ಇವೆಲ್ಲವುಗಳನ್ನೂ ಒಂದಕ್ಕೊಂದು ವಿರೋಧವಾಗದಂತೆ ಹೊಂದಿಸಿ, ಜನಮಾನ್ಯವಾಗುವಂತೆ ಸಾಗಿಸಿಕೊಂಡು ಹೋಗುವದು ಒಬ್ಬಿಬ್ಬರ ಕೆಲಸವಲ್ಲ. ಮೊದಲೇ ಹೇಳಿದಂತೆ ಪ್ರತಿಯೊಬ್ಬನೂ ತನ್ನ ಶೀಲ, ಸ್ವಭಾವಗಳನ್ನು ಕಾಯ್ದುಕೊಂಡು, ಸಾಹಸದಿಂದಲೂ, ಚಾತುರ್ಯದಿಂದಲೂ—ಕೆಲಸವು ತನ್ನದೆಂಬ ಅಭಿಮಾನದಿಂದ—ವರ್ತಿಸಿದಲ್ಲಿ ನಮ್ಮ ಗುರಿಯು ಬೇಗನೆ ಸಾಧ್ಯವಾಗುವದು. ಈ ನಾಟಕದಲ್ಲಿಯೂ ಕೂಡ ಇದನ್ನೇ ಮನರಂಜನೆಯಾಗುವಂತೆ, ಮಾರ್ಮಿಕತೆಯಿಂದ ಹೇಳಿದೆ. ಓದುಗರು ಇದನ್ನು ತಿಳಿದುಕೊಂಡು ಅದರಂತೆ ನಡೆದಲ್ಲಿ, ನಾಟಕಕಾರನದೂ, ಮುನ್ನುಡಿಕಾರನದೂ ಉದ್ದೇಶವು ಸಫಲವಾಗುವದು.

ಮಾಳಮಡ್ಡಿ<br>ಧಾರವಾಡ.<br>೬-೮-೧೯೩೩

**ಧೀರೇಂದ್ರ ಕೃಷ್ಣ ಗುಂಜೀಕರ**

# ಪಾತ್ರಗಳು

೧. ಸೂತ್ರಧಾರ

೨. ನಟಿ

೩. ಶ್ರೀಧರ

೪. ಕೊಂಕಣ್ಣಾ } ಶ್ರೀಧರನ ಸಹಪಾಠಿಗಳು
೫. ಲಲಿತಾ }

೬. ಜೋಯಿಸರು

೭. ಸೆಟ್ಟಿಗಳು

೮. ಕಮ್ಮಾರ ಕಾಳಪ್ಪ

೯. "ರಾಯರು"— ಶ್ರೀಧರನ ತಂದೆ

೧೦. "ಬಾಯಿ"ರು— ,, ತಾಯಿ

೧೧. ಲಲಿತೆಯ ತಂದೆ

# ದರಿದ್ರ-ನಾರಾಯಣ

ಇಲ್ಲವೆ

### ಭವಿಷ್ಯ-ಪುರಾಣ

## ಮೊದಲನೆಯ ಅಂಕ

(ತರುವಾಯ-ಅಂದರೆ ತೆರೆಯು ಮೇಲೆದ್ದ ತರುವಾಯ ಸೂತ್ರಧಾರನು ಪ್ರವೇಶಿಸುವನು. ಇದೇನು! ಹರಕು-ಬರುಕಾಗಿ ಸುತ್ತಿಕೊಂಡಿರುವ ಇವನ ಧೋತರವೇನು, ಉದ್ದವಾದ ಕರಿಯಕೋಟು ಹಾಕಿಕೊಂಡು ಬಿಳಿಯ ಮುಂಡಾಸು ಸುತ್ತಿಕೊಂಡ ಈ ತರುಣನು ಕತ್ತಲೆಮನೆಯ ತೆರೆದಿಟ್ಟ ಕಿಟಕಿಯಂತೆ ಕಾಣುವದೇನು, ಸೂತ್ರಧಾರನೆಂದು ಹೇಳುವದೇನು! ಪ್ರೇಕ್ಷಕರೆ, ನಿಮ್ಮ ಸಂಶಯವು ಸರಿಯಾದುದು. ಈ ತರುಣನು ವೇಷದಿಂದ, ಇಲ್ಲವೆ ಕಯ್ಯೊಳಗಿನ ಉಪಕರಣಗಳಿಂದ ಸೂತ್ರಧಾರನಂತೆ ಕಾಣುವದೇ ಇಲ್ಲ. ಆದುದರಿಂದಲೆ ಸೂ-ತ್ರ-ಧಾ-ರ ಎಂದು ಒಡೆದು ಬರೆಯಬೇಕಾಯಿತು. ನಿಜವಾಗಿಯೂ ಸಮಾಧಾನಬುದ್ಧಿಯಿಂದಲೂ ನೋಡಿದಲ್ಲಿ ಇವನು ಸೂತ್ರಧಾರನೆಂದು ನಿಮಗಾದರೂ ಒಮ್ಮೊಮ್ಮೆ ಹೊಳೆಯಬಹುದು. ನಾಟಕದಲ್ಲಿ ಮೊತ್ತಮೊದಲಿನ ಇವನ ಪ್ರವೇಶವೆ ಇವನ ಸೂತ್ರಧಾರಪದವಿಯ ಸಬಲವಾದ ಸಾಕ್ಷ್ಯವಲ್ಲವೆ? ಇದಲ್ಲದೆ ಇನ್ನುಮುಂದೆ ಬರುವ ಪಾತ್ರವು ನಟಿಯು. ಪ್ರೇಕ್ಷಕರೆ, ವಿಚಾರಮಾಡಿರಿ; ಸೂತ್ರಧಾರನೇ ಕರೆಯದೆ ನಟಿಯು ಬರುವದುಂಟೆ? ಪತಿಯಲ್ಲದ ಪರಪುರುಷನ ಮುಖವನ್ನಾದರೂ ನಮ್ಮ ಆರ್ಯಕುಲೋತ್ಪನ್ನ-ಸತಿಯರು ನೋಡಬಹುದೆ? ಇನ್ನೂ ನಿಮ್ಮಲ್ಲಿ ವಿಶ್ವಾಸವಿರದಿದ್ದರೆ, ಈ ತರುಣನು ನಟಿಯ ಗಂಡನೆಂದಾದರೂ ನಂಬಿಕೆಯಿರಲಿ. ಸೂತ್ರಧಾರನೇನೊ ಒಳಿತಾದ ಉತ್ಸಾಹದಲ್ಲಿರುವನೆಂಬುದು ದಾನಶೂರನ ಮನೆ-ಬಾಗಿಲಿನಂತೆ ತೆರೆದಿಟ್ಟ ಅವನ ಮುಖದಿಂದಲೆ ತಿಳಿಯುವದು. ಉತ್ಸಾಹದ ಭರದಿಂದಲೆ ಉಸುರ್ಗರೆದು—)

ಸೂತ್ರಧಾರ:— ಅಹಾ, ಯಾವ ದೇವನನ್ನು ಸ್ತುತಿಸಲಿ! ಇಂದು ನನ್ನ ಆನಂದಕ್ಕೆ ಅಳತೆಯೆ ಇಲ್ಲ. ಹಿಂದಿನ ಹದಿನೈದು ವರುಷಗಳಿಂದ ಒಂದೇಸವನೆ ಹಾರಿದ ನನ್ನ ಬಲಗಣ್ಣು ಮೇಲಕ್ಕೇರಿ ಇಂದು ಸ್ವರ್ಗದ ಕಿಟಕಿಯಂತೆ ಕಾಣುವದು! ಯಾವ ದೇವನನ್ನು ಸ್ತುತಿಸಲಿ? ವಿಷ್ಣುವನ್ನು........? ಛೆ, ಬೇಡ. ಸಂಪತ್ತಿನ ಒಡತಿಯಾದ ಹುಡುಗೆಯ ಗಂಡನೆನ್ನಿಸಿಕೊಂಡು ಮಾವನಾದ ಸಮುದ್ರನಾಥನಲ್ಲಿಯೆ ಉಂಡುಟ್ಟು ಕಾಲ ಕಳೆಯುವ ನಿರಭಿಮಾನಿ ತರುಣನಿವ! ಶಿವನನ್ನು ಸ್ತುತಿಸಲಿಯಾ....? ಛೇ, ಅದೂ ಬೇಡ. ಸಂಸಾರದ ಸತ್ವಸಾರನಾದ ಕಾಮನನ್ನು ಸುಟ್ಟು ಸಂಸಾರ ಹೂಡಿದ ಹೆಡ್ಡನಿವ! ಬ್ರಹ್ಮನನ್ನು....? ಹುಂ, ಅದಂತೂ ಕೊಂಚವಾದರೂ ತರವಲ್ಲ. ಅಳಿಯನಾದ ಮಾವನು ಅವನು. (ಉದ್ವೇಗದಿಂದ) ಅಯ್ಯೋ, ಏನು ಮಾಡಲಿ? ಉಸಿರಿಗೊಂದು ದೇವನನ್ನು ದಯಪಾಲಿಸಿದ ನಮ್ಮ ಧರ್ಮದಲ್ಲಿ ವೇಳೆಗೆ ಒದಗುವ ದೇವನು ಒಬ್ಬನೂ ಇಲ್ಲವೆ? (ವಿಚಾರಿಸಿ, ಸಮಾಧಾನದಿಂದ) ಅಹಾ, ಹೀಗೆ ಮಾಡುವೆ. ಆಕೆಯನ್ನೆ ಕೇಳುವೆ. ಹೆಸರಾದ ದೇವತೆಗಳಷ್ಟೆ ಗಂಡಸಿಗೆ ಗೊತ್ತಿದ್ದರೆ ದೇವತೆಗಳ ಹೆಸರುಗಳೆಲ್ಲ ಹೆಂಗಸಿಗೆ ಗೊತ್ತು. (ಎಂದು ಮುಂದೆ ಬಂದು "ಏನೆ, ಏನೆ, ಇತ್ತಕಡೆ ಬಾ ನೋಡುವ" ಎಂದು ಗಟ್ಟಿಯಾಗಿ ಕೂಗುವನು. ಕೂಗಿದ ಮಾತ್ರವೆ ನಟಿಯು ಬರುವದರಿಂದ ಅವಳು ಮಹಾಪತಿವ್ರತೆಯಲ್ಲನೆ ಎಂದು ಅವಸರದಿಂದ ಆದರ ತೋರಿಸಬೇಡಿ. 'ನೋಡಿದಿರಾ ಅವಳ ಮುಖವನ್ನು? ಅದನ್ನು ನೋಡಿದ ಕ್ಷಣದಲ್ಲಿಯೆ ಕೆಂಪೇರುವ ಸೂರ್ಯನನ್ನು ಎದುರಿಸುವ ಚಂದ್ರನಂತೆ ಸೂತ್ರಧಾರನ ಮುಖವು ಹೇಗೆ ಕಳೆಗುಂದಿತು ನೋಡಿದಿರಾ? ಹೊಸ

ತಾದ ಸೀರೆಯಿಲ್ಲ, ಹೊಳೆಯುವ ಕುಪ್ಪಸವಿಲ್ಲ, ಕಣ್ಣು ಕುಕ್ಕಿಸುವ ಕಂಕಣಹಾರಗಳಿಲ್ಲ. ಇಂತಹ ಸ್ಥಿತಿಯಲ್ಲಿ ಯಾವ ಹೆಂಗಸು ತಾನೆ ಕೋಪಿಸಲಿಕ್ಕಿಲ್ಲ? ಮನೆಯಲ್ಲಿ ಮಣ್ಣು ಮುಕ್ಕಿಸಿದರೂ ಸರಿ, ಮಂದಿಯ ಕಣ್ಣು ಕುಕ್ಕಿಸಬೇಕೆಂದು ಹೆಂಗಸಿನ ಹಟ; ಏನು ಅದು ಹಾಗಿದೆಯೆಂದು ತಿಳಿದುಕೊಳ್ಳುವದು ಗಂಡಸಿನ ಚಟವೊ? ಇರಲಿ, ನಟಿಯ ಕೋಪಾವೇಶವು ಅವಳ ಮಾತಿನಿಂದಲೆ ಕಂಡುಬರುವದು.)

ನಟಿ:— (ಸಿಟ್ಟಿನಿಂದ ಅಣಕಿಸುತ್ತ) ಏನೆ, ಏನೆ, ಏನೆ! "ಆ" ಎಂದರೆ "ಓ" ಇಲ್ಲ; ತಮಗೆ "ಹುಂ" ಎನ್ನಿಸಿದಾಗ ಏನೆ, ಏನೆ!

ಸೂತ್ರಧಾರ:— (ಬೆದರಿಕೆಯ ಶಾಂತತೆಯಿಂದ) ಕೊಂಚ–ಕೊಂಚ–ತಡೆ. ಆನಂದದ ಉತ್ಸಾಹದಿಂದ ಕೂಗಿದೆ.

ನಟಿ:— (ಮೊದಲಿನಂತೆಯೆ) ಮನೆಯ ಪರಿವೆಯನೆ ಬಿಟ್ಟ ಮೇಲೆ ಕೂಗುವ ಉತ್ಸಾಹ ಆಗದೆ ಏನು ಮಾಡೀತು? ಅತ್ತ್ತ್ತತ್ತು ಈಗ ತಾನೆ ಕೂಸು ಮಲಗಿತು ಎಂದು ಕೈ ತೆರವಾಗಿ ಉಶ್ ಅಂತಿದ್ದೆ. ನಿಮ್ಮ ಕೂಗಾಟದಿಂದ ಮತ್ತೆ ಕೂಸು ಎಬ್ಬಿಸಿದಿರಿ ಅಂದರೆ ನಡೆಯಿತು ಸಂಸಾರದ ಹಾಡು.

ಸೂತ್ರಧಾರ:— (ಮೇಲಿನಂತೆಯೆ) ಅಲ್ಲೆ, ನನ್ನ ಮಾತನಾದರೂ ಕೇಳಿಕೊ. ಇಷ್ಟು ವರ್ಷಗಳಿಂದ ಈ ಹೊತ್ತಿನ ದಿವಸ ನಾಟಕ ಆಡಿ ತೋರಿಸಬೇಕು ಎಂದು ಊರಜನರು ಹೇಳಿಕೊಂಡಾರೆ. (ಸುಳ್ಳುನಗೆಯಿಂದ) ನಾಟಕದ ದೇವತಾ ನೀನು ಎಂದು—

ನಟಿ:— (ಸಿಟ್ಟಿನ ಸೋಗಿನಿಂದ) ಆಯಿತು, ಮಾತಿಗೆ ಮಾತಿಲ್ಲ. ಹಾಲು ಇಲ್ಲದೆ ಕೂಸು ಅಳುವದು ಎಂದರೆ ನಾಟಕಾ

ಮಾಡಬೇಕು ಅಂತೆ! ಹುಡುಗನ್ನೇನು ನಿಮ್ಮ ನಾಟಕದ ಕ್ಷೀರಸಾಗರದೊಳಗೆ ಮುಳುಗಿಸುವವರೇನು?

ಸೂತ್ರಧಾರ:— (ಕೊಂಚ ಹೆದರಿಕೆಯಿಂದಲೆ) ಇಲ್ಲ, ಇಲ್ಲ....ನಾನೂ ಅದನ್ನೇ ಹೇಳಬೇಕೆಂದು ಮಾಡಿದ್ದೆ. ಇದು ನೋಡು, ನಾಟಕಾ ಮಾಡುವದೆಂದರೆ ನಮ್ಮ ಕುಲಧರ್ಮ. (ನಗೆಯಿಂದ) ಕುಲಧರ್ಮ ಹಾಳಾದರೆ ಸಮಾಜವೆ ಹಾಳಾಗುವ ದೆಂದು ಅರ್ಜುನ ಹೇಳಲಿಲ್ಲವೆ ರಣಾಂಗಣದ ಮೇಲೆ? ತದ್ವತ್, ಈ ನಾಟಕಾ ಮಾಡುವದರ ಎಲ್ಲ ಜವಾಬ್ದಾರಿ ನಮ್ಮ ಮೇಲೆ ಎಂದು ಊರ ಜನಾ ಹೇಳಿಯಾರೆ, ನನ ಗಾದರೂ ಅದೇ ಸಮ್ಮತ, ನಿನಗಾದರೂ— .

ನಟಿ:— (ಕೋಪದಿಂದ) ಸಾಕು, ನಂಗಾದ್ರೂ ನಿಂಗಾದ್ರೂ! ಗುಡಿಗೆ ಬೆಂಕಿ ಹತ್ತಿದಾಗ್ಲೆ ಪುರಾಣ ಹೇಳುವ ಧರ್ಮ ನಿಮ್ಮದು! ಕುಲಧರ್ಮಾ ಅಂತೆ! ಊರಜನರಿಗೆ ನಾಟಕ ಬೇಕಾದರೆ ಕೊಡಲಿ ಅದರ ವೆಚ್ಚ, ಅರಿವೆ, ಅಂಚಡಿ—

ಸೂತ್ರಧಾರ:— (ಕನಿಕರದಿಂದ) ಎಲೆಲೆ, ಏನಿದು? ದುಡ್ಡಿಗಿಂತ ಧರ್ಮ ದೊಡ್ಡದು, ಧರ್ಮಕ್ಕಿಂತ ಕೀರ್ತಿ ದೊಡ್ಡದು, ಗೊತ್ತಿ ಲ್ಲವೆ ನಿನಗೆ? ದೇವರೇ ಹೇಳಿಯಾನೆ—

ನಟಿ:— (ತಡೆಯದೆ) ಆ ಹೇಳಿದ ದೇವರಿಗೆ ಮಾಡಿರಿ ನಿಮ್ಮ ಕೀರ್ತಿಯ ಆರತಿ! ಬೂದಿ ಬಡಿದುಕೊಂಡು ಬೈರಾಗಿ ಯಾಗಿರಿ ಬೇಕಾದರೆ- (ತಿರಸ್ಕಾರದಿಂದ) ಬೂದಿ ಕೂಡ ನಿಮ್ಮ ಮನೆಯ ಒಲಿಯೊಳಗೆ ಸಿಕ್ಕಲಿಕ್ಕಿಲ್ಲ.

ಸೂತ್ರಧಾರ:— (ಸಮಾಧಾನದಿಂದ) ಏನೆ, ಇದು ನೋಡು. ಸಮಾಜ ನೆರೆಯುಹತ್ತಿತು ನಮ್ಮ ನಾಟಕ ನೋಡಲಿಕ್ಕೆ; ಇಷ್ಟು

ಕೋಪ ಯಾಕೆ? ನಮ್ಮ ನಾಟಕಕ್ಕೆ ದುಡ್ಡು ಬೇಡ, ಬಟ್ಟೆ ಬೇಡ-ಅಂದರೆ ಬೆಲೆಬಾಳುವ ಬಟ್ಟೆ ಬೇಡ, ರಂಗ-ಸಿಂಗಾರ ಬೇಡ—

ನಟಿ:— ಬೇಡಾದರೆ ಬಿಡಿರಿ ನೀವು. ಮೈತುಂಬ ಸೀರೆ, ಕಣ್ಣಾ ತುಂಬ ಆಭರಣ ಇಲ್ಲದಿದ್ದರೆ ನಾನೇನು ಕಾಲಿಡುವಾಕೆ ಅಲ್ಲ. ನಾಲ್ಕು ಜನರ ಮುಂದೆ ಬಂದು ಹಾಡಿ ಕುಣಿ ಯುವದಕ್ಕೆ ಸಿಂಗಾರ ಮಾಡದಿದ್ದರೆ ಮನೆಯ ಮುಸುರಿ ತಿಕ್ಕುವಾಗ ಬಂಗಾರ ಇಡಬೇಕೆ?

ಸೂತ್ರಧಾರ:— ಅಲ್ಲೆ, ಸಿಂಗಾರದ ನಾಟಕಾ ಯಾಕೆ ಮಾಡಬೇಕು? (ಗಂಭೀರವಾಗಿ) ಸಾಮಾನ್ಯಜನರ ನಡತೆ, ಸಾಮಾನ್ಯಜನರ ನುಡಿ, ಸಾಮಾನ್ಯಜನರ ವ್ಯವಹಾರ; ಇದಕ್ಕೆ ಯಾಕೆ ಸಿಂಗಾರ?

ನಟಿ:— ಸಾಮಾನ್ಯಜನ ಅಂದರೆ ದರಿದ್ರ-ನಾರಾಯಣ ಎಂದು ತಿಳಿದಿರೊ?

ಸೂತ್ರಧಾರ:— (ಚಪ್ಪಾಳೆಯಿಂದ) ಓಹೋ, ದರಿದ್ರನಾರಾಯಣ, **ದರಿದ್ರ ನಾರಾಯಣ!** ಇದುವರೆಗೆ ಯಾವ ನಾಟಕ ಮಾಡ ಬೇಕು, ಯಾವ ದೇವನನ್ನು ಸ್ತುತಿಸಬೇಕು ಎಂದು ಪೇಚಾಟದಲ್ಲಿದ್ದೆ. (ಅಭಿಮಾನದಿಂದ) ಪ್ರಿಯೆ, ನಿನ್ನ ಸೂಚ ನೆಯು ಮಾನ್ಯವಿದೆ, ನಿನ್ನ ಹೇಳಿಕೆಯಂತೆ ದರಿದ್ರನಾರಾ ಯಣವೆಂಬ ನಾಟಕವನ್ನೇ ಆಡಿ ತೋರಿಸುವಾ.

ನಟಿ:— (ಮೈಮರೆತು) ಆಗಲಿ, ಯಾವ ಕಾಲವನ್ನಧಿಕರಿಸಿ ಹಾಡಲಿ?

**ಸೂತ್ರಧಾರ:—** (ಎಚ್ಚತ್ತವನಂತೆ) ಅಂ-ಏನಂದೆ? ಹಾಡು! ಕಾಲವನ್ನಧಿಕ ರಿಸಿ! ಪ್ರಿಯೆ, ಅಧಿಕರಿಸುವ ಕಾಲವಿದೆಯೆ? ಧಿಕ್ಕರಿ

ಸುವ ಕಾಲವಿದು. ಮಳೆಗಾಲ ಬಂದಿತೆಂದರೆ ಮಾರಿಕಾ ಹಬ್ಬುವದು ದೇಶದಲ್ಲೆಲ್ಲ; ಚಳಿಗಾಲ ಬಂದಿತೆಂದರೆ ಎದೆ ನಡುಗಿ ಸಾಯುವರಲ್ಲ ಬಟ್ಟೆಯಿಲ್ಲದ ಬಡಬಗ್ಗರು; ಬೇಸಿಗೆ ಬಂದರೆ ಬಿಸಿಲುಗುದುರೆಯಲ್ಲಿ ಬೆಂದು ಹೋಗು ವರಲ್ಲ ಆಶೆಗೆಟ್ಟ ಭೂಮಾತೆಯ ಮಕ್ಕಳು! ಪ್ರಿಯೆ, ಹಾಡುವದಾದರೆ ಭಾರತವರ್ಷದ ನಾಲ್ಕನೆಯದಾದ ಬರಗಾಲನ್ನು ಕುರಿತು ಹಾಡುವೆಯಂತೆ. ಬುದ್ಧಿಯ ಬರ, ಶಕ್ತಿಯ ಬರ, ಉತ್ಸಾಹದ ಬರ—

ನಟಿ:— ಇದೇನು ಬರಬರ ಎಂದು ಇಲ್ಲದ್ದು ಮಾತನಾಡುವದು? ಅಷ್ಟೊಂದು ಬರದ ಸುಗ್ಗಿ ಇದ್ದರೆ ಹಾಡಿರಿ ನಿಮ್ಮ ದರಿದ್ರನಾರಾಯಣನ ಪಾರಾಯಣ.

ಸೂತ್ರಧಾರ:— (ಮುಂದೆ ನೋಡಿ) ಅದೊ, ನೋಡು, ನಮ್ಮ ನಾಟಕದ ನಾಯಕ, ಶ್ರೀಧರ; ಸಾಕ್ಷಾತ್ ದರಿದ್ರನಾರಾಯಣ ನಂತೆ ಹೇಗೆ ಬರುತ್ತಿರುವ. (ವಿಷಾದದ ನಗೆಯಿಂದ) ದರಿದ್ರ ನಾರಾಯಣ ಅಂದರೆ ಅರ್ಥವಾಗುವದೆ ನಿನಗೆ? ಮನು ಷ್ಯನು ದರಿದ್ರನಾದ ಕ್ಷಣ ನಾರಾಯಣ ಎನ್ನುವನು; ಅಂದರೆ ಸ್ವರ್ಗ ಕಾಣುವನು ಎಂದು ತಾತ್ಪರ್ಯ. ಆಗಲಿ, ನಡೆ; ನೀನು ಎಲ್ಲ ಸಿದ್ಧತೆ ಮಾಡು, ಅಷ್ಟರಲ್ಲಿ ಒಂದು ಹಾಡಿನಿಂದ ಹೊಗಳಿ ಬರುವೆ ದೇವರನ್ನು.

ನಟಿ:— (ಒಮ್ಮೆಲೆ) ಅಮ್ಮಯ್ಯ, ಈಗ್ಗೆ ಸ್ಮರಣೆಗೆ ಬಂದಿತು. ನೀವು ಇಲ್ಲಿ ಕೀಸರಿಟ್ಟು ಹಾಡಿದಿರಿ ಎಂದರೆ ಜನರ ಚಪ್ಪಾಳೆ ಯಿಂದ ಮತ್ತಿಷ್ಟು ಗಲಾಟೆಯಾಗಿ ನನ್ನ ಕೂಸು ಎಚ್ಚ ರಾದೀತು. (ನಗೆಯಿಂದ) ಕೂಸು ಎಚ್ಚರಾಗಿ ಅಳಹತ್ತಿ

ದರೆ ಆಯಿತು ನಿಮ್ಮ ನಾಟಕದ ಭರತವಾಕ್ಯ. (ಹೋಗುತ್ತ) ಹಾಡುವ ಹಟಾ ಇದ್ದರೆ ಮನಸ್ಸಿನೊಳಗೆಯೆ ಗುಣು ಗುಣು ಅನ್ನುತ್ತಾ ಒಳಕ್ಕೆ ಬನ್ನಿ (ಹೋಗುವಳು).

ಸೂತ್ರಧಾರ:— ಅದೂ ನಿಜವೆ. ನಾಟಕವೆಂದರೆ ಆಡಿತೋರಿಸುವದು, ಹಾಡಿತೋರಿಸುವದಲ್ಲ. (ಮುಂದೆ ನೋಡಿ) ಸದ್ಯಕ್ಕೆ ತೋರಿಸಬೇಕಾಗಿದೆ ಈ ಶ್ರೀಧರನ ಹಾಡು. ಇದೇ ನಮ್ಮನಿಮ್ಮ ಹಾಡು. ಇದು ತಪ್ಪಲಿ ತೀವ್ರ ಎಂದು ದೇವರಿಗೆ ನನ್ನ ಹಾಡು (ಎಂದು ಕೈಮುಗಿದು ಹೋಗುವನು).

(ವೃತ್ತಪತ್ರವನ್ನು ಓದುತ್ತ ಶ್ರೀಧರನು ಬರುವನು. ಶ್ರೀಧರನು ದರಿದ್ರನಾರಾಯಣನ ಅವತಾರವೆಂದು ಸೂತ್ರಧಾರನು ಹೇಳಿದರೂ ಅವನನ್ನು ಬಣ್ಣಿಸುವದು ಕಷ್ಟ ಸಾಧ್ಯವಾಗಿದೆ. ಉಡುಪು-ತೊಡಪುಗಳಂತೂ ಸಾಮಾನ್ಯವೆಂದು ಬೇರೆ ಹೇಳಬೇಕಾಗಿಲ್ಲ. ವೈಶಿಷ್ಟ್ಯವೆಂದರೆ ತೊಟ್ಟದ್ದೊಂದು ಶರ್ಟಿನ ಗುಂಡಿ ಹಾಕಿಲ್ಲ; ಉಟ್ಟ ಧೋತರವು—ತೀಡಿಲ್ಲವೇಕೆ? ತೀಡಿದರೂ ತಿದ್ದು ಆಗದ ಅಶಿಕ್ಷಿತ ಹೆಂಡತಿಯ ಕೂಡ ಸಂಸಾರದಂತೆ—ಅಲ್ಲೋಲಕಲ್ಲೋಲನಾಗಿ ಹಾರಾಡುತ್ತಲಿದೆ. ಓದುವನು, ಉಸುರ್ಗರೆಯುವನು, ತಡೆದ ಉಸಿರು ಸಡಿಲಾಯಿತೇನೊ ಎನ್ನುವಂತೆ ಹಣೆಯ ಗಂಟು ಸಮನಾಗುವದು. ಇದೀಗ ಅವನ ಉದ್ವಿಗ್ನಮುಖವನ್ನು ನೋಡುವವರು ಅವನ ವಯಸ್ಸು ೨೫ ಎಂದು ಹೇಳಿದರೆ ಒಪ್ಪಲಾರರು. ನೋಡುವ, ತಾರುಣ್ಯದ ಆವೇಶವು ವಯಸ್ಸಿನಲ್ಲಿ ಯಾದರೂ ಇದೆಯೆ ಹೇಗೆ ? )

ಶ್ರೀಧರ:— (ತಿರಸ್ಕಾರದಿಂದ, ನಿರಾಶೆಯಿಂದ) ವೃತ್ತಪತ್ರವಂತೆ !—ವರ್ತಮಾನಪತ್ರವಂತೆ !—ಯಾರಿಗೆ ಬೇಕಾಗಿದೆಯೊ ವೃತ್ತ—ಆಗಿ ಹೋದದ್ದು !—ಆದದ್ದೆಲ್ಲ ನಮ್ಮ ಸಮಾಜದೊಳಗೆ ಒಂದು ದೊಡ್ಡ ತಪ್ಪೇ ಆಗಿದೆ. ಅದನ್ನು ಮಾಡುವದೇನು ಈಗ್ಗೆ ?—ವರ್ತಮಾನವಂತೆ !— ಏನಿದೆ ವರ್ತಮಾನ ?—ಆಸ್ಟ್ರೇಲಿಯಾದಲ್ಲಿ ಬಂಗಾರದ ಕಣಿ ಹುಟ್ಟಿ

ತಂತೆ! ರಶಿಯಾದಲ್ಲಿ ಸಂಪತ್ತು ಬೆಳೆಯಿತಂತೆ!–ನಿಮ್ಮಲ್ಲಿ ಏನಾಯಿತೊ ಹಾಳುಗೂಬೆಗಳೆ?— ಎಲ್ಲ ರೋಗಗಳ ಮೇಲೆ ರಾಮಬಾಣವಂತೆ! ರಾವಣನನ್ನು ಬಿಟ್ಟು ರೋಗದ ಬೆನ್ನು ಯಾಕೆ ಹತ್ತಿದೆಯೊ ರಾಮನ ಬಾಣ?— ಪತ್ರಗಳನ್ನು ಹೇಗೆ ಹೊರಡಿಸಬೇಕು, ಕಲ್ಪನೆಯೆ ಇಲ್ಲ ನಮ್ಮ ಜನರಿಗೆ. ಕಯ್ಯಲ್ಲಿ ಹಿಡಿದದ್ದೊಂದೇ ತಡ, ಢಾಳವಾಗಿ ಕಾಣಿಸಬೇಕು ಏನಾದರೊಂದು ಲೋಕ ಕಲ್ಯಾಣದ ಸುದ್ದಿ. "ಬೇಕಾಗಿದೆ, ಬೇಕಾಗಿದೆ, ಶಿಕ್ಷಕರು ಬೇಕಾಗಿದೆ, ಸಂಬಳ, ತಿಂಗಳೊಂದಕ್ಕೆ ೨೦೦" ಇಂತಹದೇನಾದರೊಂದು.—ವಿದ್ಯೆಯಿಲ್ಲ, ಕಲೆಯಿಲ್ಲ,ವಿದ್ಯೆಯ ಪ್ರಸಾರವಿಲ್ಲ, ನಮ್ಮಂತಹ ವಿದ್ಯಾವಂತರ ಸದುಪಯೋಗ ಮಾಡಿಕೊಳ್ಳುವ ಕಲೆ ಗೊತ್ತಿಲ್ಲ. ನಮ್ಮ ಸಮಾಜಕ್ಕೆ ಸದ್ಯಕ್ಕೆ ಬೇಕಾದುದು ವೃತ್ತಪತ್ರವಲ್ಲ, ವರ್ತಮಾನಪತ್ರವಲ್ಲ, ಭವಿಷ್ಯಪತ್ರ; ನಮ್ಮಂತಹ ಸುಶಿಕ್ಷಿತ ನಿರುದ್ಯೋಗಿ ಉತ್ಸಾಹಭರಿತ ತರುಣರ ಭವಿಷ್ಯವನ್ನು ಬರೆಯುವ ಪತ್ರ. ("ಯಾಕೆ ಶ್ರೀಧರ" ಎಂದು ಜೋಯಿಸರು ಬರುವರು. ಜೋಯಿಸರೆಂದರೆ ಹಳೆಯಕಾಲದ ಜ್ಯೋತಿಷಿ ಇಲ್ಲವೆ 'ಜೇಬಿಸಿ'—ಎಂದರೆ ಎರಡನೆಯವರ ದುಡ್ಡು ತಮ್ಮ ಜೇಬಿನಲ್ಲಿ ಹಾಕಿಕೊಳ್ಳುವವರು. ನೋಡಿರಿ ನಮ್ಮ ಜೋಯಿಸರ ಎಡಗೈಯ್ಯಲ್ಲಿಯ ಬಂಗಾರದ ಕಡಗವನ್ನು. ಬಲಗೈಯು ಯಾವಾಗಲೂ ಎದೆಯ ಮೇಲೆ; ಹೊದ್ದುಕೊಂಡ ಶಾಲು ಸರಿದು ತಮ್ಮ ನಿಜವಾದ ಹೃದಯವು ಎರಡನೆಯವರಿಗೆ ಕಾಣುವದೆಂಬ ಭೀತಿಯೇನೊ ಅವರಿಗೆ. ಇರಲಿ, ಅವರು ಒಮ್ಮೆಲೆ ಬಂದುದಕ್ಕೆ ಶ್ರೀಧರನು ಬೆಪ್ಪಾಗಿ ಅವರನ್ನು ದಿಟ್ಟಿಸುವನು).

ಜೋಯಿಸ:— (ನಗೆಯಿಂದ) ಇದೇನು, ಶ್ರೀಧರ, ಬೀದಿಯಲ್ಲಿ ಭವಿಷ್ಯ?

ಶ್ರೀಧರ:— ಅಲ್ಲ. ಇನು ಭವಿಷ್ಯದ ಬೇಡಿ. ಜೋಯಿಸರೆ, ನಿಮಗೆ ಹಂಚಿಕೆಯೊಂದು ಹೇಳುವೆ. ನಮ್ಮ ದೇಶದ ನೀವು ಜೋಯಿಸರೆಲ್ಲ ಕೂಡಿ ಒಂದು ಭವಿಷ್ಯಪತ್ರವನ್ನು ಹೊರಡಿಸಬಾರದೆ?

ಜೋಯಿಸ:— (ಗಾಬರಿಯಿಂದ) ಅಂದರೆ? ಮುಂದೆ ನಮ್ಮ ಭವಿಷ್ಯವೇನು? ಏನೊ, ನಾಲ್ಕ-ಜನ ಬಡಬಗ್ಗರು ಬರುವರು; ಅವರ ಮನಸ್ಸು ತುಂಬುವದು, ನಮ್ಮ ಹೊಟ್ಟೆ ತುಂಬುವದು. ಓದು–ಬರೆ ಬರುವದು ಎಷ್ಟು ಜನಕ್ಕೆ? ನಾವೆಲ್ಲ ಪತ್ರ ಹೊರಡಿಸಬಹುದು, ಆದರೆ ಜನರಿಂದ ಉತ್ತರ ಬರುವದು ಹೇಗೆ? (ಮೆಲ್ಲಗೆ) ಇದಲ್ಲದೆ ಇನ್ನೊಂದು ಸಂಗತಿ; ಓದು ಬರೆ ಬಂದರೆ ಜನರು ಭವಿಷ್ಯಶಾಸ್ತ್ರ, ಜ್ಯೋತಿಷ್ಯ ತಮ್ಮ ತಾವೇ ಓದಬಹುದಲ್ಲವೆ? ಮುಂದೆ—ನಮ್ಮ ಹಣೆ ಬರಹ? ಏನಿಲ್ಲ, ಇದ್ದದ್ದೇ ಸುಖವಾಗಿದೆ; ಅವರವರ ಅದೃಷ್ಟ ಅವರಿಗಿದೆ.

ಶ್ರೀಧರ:— ಅವರವರ ಅದೃಷ್ಟ ಅವರಿಗೆ ಕಷ್ಟ, ನಿಮಗೆ ಇಷ್ಟ ಅಲ್ಲವೆ?

ಜೋಯಿಸ:— ಕಷ್ಟ ಆಗುವದು ಅವರವರ ಕರ್ಮ; ಅದನ್ನು ನಷ್ಟ ಮಾಡುವದು ಜೋಯಿಸರ ಧರ್ಮ.

ಶ್ರೀಧರ:— (ಅಣಕಿನಿಂದ) ಓಹೊ.

("ಜ್ವಾಯಿಸ್ರ, ಜ್ವಾಯಿಸ್ರ" ಎಂದು ಒಳಗಿನಿಂದ ಧ್ವನಿ; ಅದನ್ನು ಕೇಳಿ—)

ಜೋಯಿಸ:— ಇದೊ, ಕಮ್ಮಾರ ಕಾಳಪ್ಪ ನನ್ನನ್ನೆ ಒದರಿಕೊಳ್ಳುತ್ತಾ ಬರುವ; ತೋರಿಸುವೆ ನಿಮಗೆ ಜೋಯಿಸರ ಧರ್ಮ.

# ದರಿದ್ರನಾರಾಯಣ

(ಶ್ರೀಧರನು ಏನನ್ನೊ ಮಾತನಾಡಬೇಕೆನ್ನುವಷ್ಟರಲ್ಲಿ ಕಮ್ಮಾರ ಕಾಳಪ್ಪನು ಬರುವನು. ಕಮ್ಮಾರನೆಂದ ಕೂಡಲೆ ಕಬ್ಬಿಣದಂತಹ ರಟ್ಟೆ ಮೊದಲಾಗಿ ನಮ್ಮ ನಿಮ್ಮ ಕಲ್ಪನೆಯಾಗುವದು. ಪೂರ್ವಕಾಲದ ಕಮ್ಮಾರರು ಹಾಗಿದ್ದಿರಬಹುದು. ಏನೆ ಇರಲಿ, ನಮ್ಮ ಕಾಳಪ್ಪನ ಮೈಬಣ್ಣ ಮಾತ್ರ ಕಬ್ಬಿಣದಂತೆ; ಕೈಕಾಲುಗಳು ಕಿಟಕಿಯಲ್ಲಿ ಸೇರಿಸುವ ಕಬ್ಬಿಣದ ಸಳಿಗಳಂತೆ. ಅವನ ಮೈಮೇಲಿನ ಬಟ್ಟೆಯೆಂದರೆ ಉಟ್ಟ ದೋತರ ಒಂದೆ; ಅದಾದರೂ ಕಬ್ಬಿಣದಂತಹ ಅವನ ಶರೀರದ ಮೇಲೆ ಕಮಟಿಗೆಯ ಸುತ್ತಲಿನ ಬೂದಿಯಂತೆ ಕಾಣುವದು. ಓಡುತ್ತೋಡುತ್ತ ಬಂದುದರಿಂದ ಮೈಮೇಲೆ ಬೆವರು ಸುರಿಯುತ್ತಿರಬಹುದು—ಎಂದು ನಮ್ಮ ಕಲ್ಪನೆ; ಕಾಣಿಸುವದಂತೂ ಶಕ್ಯವೇ ಇಲ್ಲ. ಇದಲ್ಲದೆ ಬಂದವನೇ ಬೆವರು ಒರೆಯಿಸಿಕೊಳ್ಳುತ್ತ—)

ಕಾಳಪ್ಪ:— (ನಿಶ್ವಾಸಬಿಡುತ್ತ) ಜ್ವಾಹಿಸ್ರು, ಜ್ವಾಹಿಸ್ರು, ಸಿವ್ನುನ್ನ ದಣೀ ಹುಡುಕಿದೆ ನೋಡಿರಿ.

ಜೋಯಿಸ:— ಯಾಕೊ, ಏನು ವರ್ತಮಾನ?

ಕಾಳಪ್ಪ:— ಅದೇನೊ ಒಡತನದಾಗ ಭರಪುತ್ತೆ ಅಂತ ಹೇಳತಾರಲ್ಲ ಹಾಗ ಬಡವರ ಸೊಂಟಗ ವ್ಯಾಗೆಯೆ ದೇವರು ಒಟ್ಟ. ಇಂದಿಗೆ ಪೂರ್ಧಿನಾ ಆಯಿತು ನೋಡಿರಿ, ನಮ್ಮಾಕೆಗೆ ಅದೇನು ದೆವ್ವೋ ಪಿಸಾಚ್ಯೋ, ಕಕ್ಕಸಾ ಒಕ್ಕಸಾ ಆಗಿ, ಬಾಯಿಗೆ ಭುರಗ ಬಂದು, ವೈಕೈ ಸೆಟೆದು, ಅನ್ನ ಉಣ್ಣಾಕಿಲ್ಲ, ನೀರ ಕುಡಿಯಾಕಿಲ್ಲ—

ಜೋಯಿಸ:— (ಗಂಭೀರವಾಗಿ) ತಿಳಿಯಿತು, ತಿಳಿಯಿತು. ಅವಳಿಗೀಗ ಮಂಗಳನ ಬಾಧೆ.

ಕಾಳಪ್ಪ:— ಮಂಗಳಾ ಪಿಂಗಳಾ. ವ್ಯಾಗಿನ ನಗಸತ್ರ ಎಲ್ಲ ಸತ್ತು ವ್ಯಾಗ ಹೋದವರನ್ನ ಬಿಟ್ಟು ಇದ್ದವರ ವ್ಯಾಗೆಯೆ ಯಾಕೊ ಕಟಾಕ್ಸ. ಅದೂ ನಮ್ಮಂತಹಾ ಬಡವರ

ವ್ಯಾಗೆಯೆ; ಸಿರಿವಂತರೇನು ಲಂಚಾಗಿಂಚಾ ಕೊಟ್ಟ್ಯಾರೇನೊ ಅವಕ್ಕೆ!

ಶ್ರೀಧರ:— ಅಲ್ಲೊ ಬುದ್ಧಿವಂತಾ, ಜೋಯಿಸರಿಗೆ ಕೇಳಿದರೆ ಅವರೇನು ಹೇಳಬೇಕೊ? ಏನಾದರೂ ರೋಗ ಇದೆಯೆ ಹೇಗೆ ಡಾಕ್ತರರಿಗೆ ಕೇಳು.

ಕಾಳಪ್ಪ:— (ಆಶ್ಚರ್ಯ ತೋರಿಸುತ್ತ) ರೋಗ! ಹೊಟ್ಟೆತುಂಬ ತಿನ್ನೋದಕೆ ಅನ್ನ ಇದ್ದವರಿಗೆ ರೋಗ, ಮೈತುಂಬ ಬಟ್ಟೆ ಸುತ್ತುವವರಿಗೆ ರೋಗ. ನಮಗೆಲ್ಲಿಯದು ಬರಬೇಕರಿ ರೋಗ; ಒಂದೂಟ ಉಣ್ಣೋದಕಿಲ್ಲ, ಚಿಂದಿ-ಬಟ್ಟೆ ಸುತ್ತೋದಕಿಲ್ಲ.

ಹೇಳತೀನಿ ಕೇಳಿರಣ್ಣಾ। ನೋಡಿರಣ್ಣಾ ತೆರೆದು ಕಣ್ಣಾ।
ಬಡರ ಜೀವ ಶಿವಶಿವ! ಹಣ್ಣಣ್ಣಾ।
ಕೇಳಿ ಕಂಠ ಬಿಗಿದು ಉಗುಳ ನುಂಗಿರಣ್ಣಾ ॥ ಪ ॥

ಹೊನ್ನು ಹೆಣ್ಣು ಮಣ್ಣು ಮೂರು।
ಜಗಕ್ಕೊಟ್ಟ ದೇವ ಯಾರು? ॥
ಶಿವ ಅಲ್ಲೆ? ಅವಗೈತಿ ಮೂರುಕಣ್ಣಾ।
ಕೊಡುವಾಗ ತೆಗೆದ ಒಂದೊಂದೆ ಕಣ್ಣಾ।
ಆಯಿತೇನು ಮೋಜು ಮುಂದೆ ಕೇಳಣ್ಣಾ।
ವ್ಯಾಗಿನ ಕಣ್ಣಾ ತೆಗೀತಾನ। ಹೊನ್ನಯ್ಯಾಗ್ಹಿಡೀತಾನ।
ಯಾಂಗೆಬೇಕ್ಯಾರಿಗ್ಹೊನ್ನೆಂದ್ಕೂಗ್ತಾನ।
ವ್ಯಾಗಿನ ಮಂಗ ನಸಗೆಂದು ಬಾಗ್ತಾನ ॥ ೧ ॥
ತೆಗೆದನಪ್ಪಾ ನಡುವಿನ ಕಣ್ಣಾ। ತೆಗೆದಿಟ್ಟ ಮಾಟದ್ಹೆಣ್ಣಾ।

ಸಡ ಇಲ್ದ ಮುದಿ ಮಂಗ ಸನಗೆಂದಾ।
ಹಿಡಿಯಪ್ಪಾ ಹೆಣ್ಣೊಂದು ಶಿವ ಎಂದಾ ॥ ೨ ॥
ಉಳಿದ ಕಣ್ಣಾ ಕೆಳಗೆ ಜಟ್ಟ। ಕೆಳಗಿಸಿಂದ ಮಣ್ಣಾ ನಿಟ್ಟ।
ಬಡಮಂಗ ಹೌಹಾರಿ ಬಾಯ್ಬಿಟ್ಟ।
ದುಡುದುಡು ಓಡಿಸಿಂತು ಕಂಗೆಟ್ಟ।
ಉಳಿದೆನಪ್ಪಾ ನಾನೆಂದು ಭೋಯಿಟ್ಟ।
ಬಂತು ಶಿವಗ ಭಾರಿ ಕೋಪ। "ಥೂ ಹೋಗೊ ಎಲ ಪಾಪ।
"ಮಣ್ಣಾಕ್ಕಡ ಬಿಡಲಾರೆ ನೀ"ನೆಂದಾ। ಕಣ್ಣಿನಾಗ ಧೂಳ ಚಲ್ಲಿ ಹೋಗೆಂದ ॥ ೩ ॥

(ವಿಷಾದದಿಂದ) ಏನು ಮಾಡೋದು ಹೇಳಿರಿ, ದುಡಿಯು ವವರಿಗೆ ಹೊಟ್ಟೆಗೆ ಹಾಕುವ ಬುದ್ಧಿ ಇಲ್ಲ ನಮ್ಮ ಜನಕ್ಕ.

ಶ್ರೀಧರ:— (ನಗೆಯಿಂದ) ಯಾಕೊ, ನಿನಗೇನಾಗಿದೆ? ಕಬ್ಬಿಣದ ಕಣಿ, ಕಮ್ಮಾರರಾ ಕುಣಿ.

ಕಾಳಪ್ಪ:— (ತ್ವೇಷದಿಂದ) ಕುಣಿಯೋದೇ ಇನ್ನು ಹುಚ್ಚೆದ್ದು. ಏನ ಐತಿರಿ ಕಮ್ಮಾರನ ಕೆಲಸ ಊರಾಗ? ಮನೆಗೊಂದು ಗಾಡಿ ಇದ್ದಾಗ ಕಮ್ಮಾರ ಬೇಡಿ ಬಂದಿದ್ದ. ಹೊಗೆ ಬಂಡಿ ಐತಿ, ಯಾರದೊ ಕಬ್ಬಿಣ, ಎಲ್ಲಿಯೋರೋ ಕಮ್ಮಾರ್ರು, ದುಡ್ಡುಕೊಟ್ಟು ಗುದ್ದಾಡುತ ನಡೆದ ನಮ್ಮ ಗೆಣೆಯು. ಏನ ಒಕ್ಕಲತನದ ಏಸಿರಿಯೆ, ಎತ್ತುಗಾಡಿ ನಡೆದಾವೆ? ಇದ್ದವರು ನಾಲ್ಕ–ಮಂದಿ ರೆಂಟೆ–ಕುಂಟೆ, ನೇಗಿಲ–ಕುಳ ಎಲ್ಲ ಕಾಗದ ಬರೆದು ಎಲ್ಲಿಂದಲೊ ತರಿಸಿ ಬಿಡ್ತಾರೆ. ಇನ್ನೂ ಹಳ್ಳಿಊರ ಹಾದಿ ಕೆಟ್ಟ ಅವೆ ಅಂತ

ಕರ್ಮಾಂತರಸದಷ್ಟು ದೈವ, ಮ್ಯಾಗ ಮ್ಯಾಗ ಇದ್ದ ನಾಲ್ಕ ಗಾಡಿಯು ಅಚ್ಚ-ಕುಳಾ ಮುರೀತಾವ. ನಾಳೆ ರಸ್ತೆ ಮೆತ್ತಗಾಗಿ ಗಾಲಿಗೆ ಲಬ್ಬರ ಸುತ್ತಿದರು ಅಂದರೆ ಒಂತು ಕರ್ಮಾಂತರಸ ಉರ್ಲ-ಸುತ್ತ. (ಅಣಕಿನಿಂದ) ನಾವೆಲ್ಲಿ ತರ್ಲೋದರಿ ಡಾಕ್ಟರ್ರಿಗೆ ದುಡ್ಡು? ಊರ-ಜೋಯಿಸರ ಕಿರಪಾ ಐತಿ, ದುಡ್ಡೆರಡದುಡ್ಡಿನ ಟೆಂಗಿನಿಂದ ನಡೀತೈತಿ ನಮ್ಮ ಗಾಡಿ. (ಕನಿಕರದಿಂದ ಜೋಯಿಸರಿಗೆ) ಜ್ವಾಯಿಸರ, ಇದೊಂದು ಜಾರಿ ಪುಣ್ಯಾ ಕಟ್ಟಿಕೊಂಡು ಬಡವನ ಜೀವಾ ಉಳಿಸರಿ. ಒಂಧಿನದ ನೀದಾ ಕಳಸ್ತೀನಿ ನಿಮ್ಮನೀ ಹಿಂದಿನ ಹಣಮುಪ್ಪಗೆ.

ಜೋಯಿಸ:— (ನಗೆಯಿಂದ) ಏನೂ ಆಗುವದಿಲ್ಲ ಹೋಗೊ. ಇನ್ನೊಂದು ಸ್ವಲ್ಪಾವಧಿಯಲ್ಲಿ ಮಂಗಳ ಸ್ಥಾನಭ್ರಷ್ಟನಾದಾ ಅಂದರೆ ಸುಖವಾಗುವದು ನಿನ್ನ ಹೆಂಡತಿಗೆ. ಅಲ್ಲಿಯವರೆಗೆ ಕೊಂಚ ಪೀಡೆ; ಪೂರ್ವಕರ್ಮಾನುಸಾರಿ ದೈವಬಲದ ಕ್ರೀಡೆ.

ಕಾಳಪ್ಪ:— (ಕೈಮುಗಿದು) ತಂ ಪುಣ್ಯಾದಿಂದ ನಮ್ಮಾಕೆ ಒದುಕಿದರೆ ಹೈನದೊಂದು ಆಕಳಾ ಕಳಸ್ತೀನಿ ನಿಮ್ಮನೀಗೆ. (ಎಂದು ನಮಸ್ಕಾರ ಮಾಡಿ ಹೋಗುವನು. ಶ್ರೀಧರನು ಅವನು ಹೋದ ಕಡೆಯನ್ನೇ ದಿಟ್ಟಿಸುವನು; ಜೋಯಿಸರು ಶ್ರೀಧರನನ್ನು ದಿಟ್ಟಿಸುವರು ಕೊನೆಗೆ ಉಸುರ್ಗರೆದು—)

ಶ್ರೀಧರ:— ಅಯ್ಯೊ, ಅನ್ಯಾಯವೆ.

ಜೋಯಿಸ:— (ಸಂಶಯದಿಂದ) ಅನ್ಯಾಯ! ಅನ್ಯಾಯವೆಲ್ಲಿಯದಪ್ಪಾ!

ಶ್ರೀಧರ:— (ಗಂಭೀರವಾಗಿ) ಜೋಯಿಸರೆ, ಇದು ಅನ್ಯಾಯವಲ್ಲವೆ? ಅಜ್ಞಾನಿಗಳ ಅಜ್ಞಾನವನ್ನು ಹೆಚ್ಚಿಸುವದು, ಅಜ್ಞಾನಿ

ಗಳಿಂದ ಜ್ಞಾನವನ್ನು ಮುಚ್ಚಿಡುವದು ಅನ್ಯಾಯವಲ್ಲವೆ? ಬಡವರನ್ನು ಬಯಲಾಶೆಯ ಬೆನ್ನುಹಚ್ಚಿ ಬಿಡುವದು ಕ್ರೂರತನವಲ್ಲವೆ? (ತಿರಸ್ಕಾರದಿಂದ) ಇವರಾದರೂ ಹೀಗೆಯೆ. ಡಾಕ್ಟರರೆಂದು ಪದವಿ ದೊರಕಿಸುವದು, ದೊಡ್ಡ ಊರುಗಳಲ್ಲಿ ದುಡ್ಡಿಲ್ಲದೆ ಜೀವ ಕೊರಗಿಸುವದು. ಹಳ್ಳಿಯ ಬಡವರಿಗೆ—

ಜೋಯಿಸ:— (ನಡುವೆ ಬಾಯಿಹಾಕಿ) ಹಳ್ಳಿಯ ಬಡವರಿಗೆ ಡಾಕ್ಟರರಲ್ಲಿ ವಿಶ್ವಾಸವಿಲ್ಲ. ರೋಗಿಯ ವಿಶ್ವಾಸವೆಂದರೆ ರೋಗ ಅರ್ಧ ವಾಸಿ. (ಮುಂದೆ ನೋಡಿ) ಅದೊ, ಬಡವರನ್ನು ವಂಚಿಸುವೆನೆಂದು ತಿಳಿದಿರುವೆಯಲ್ಲವೆ? ಊರಸೆಟ್ಟಿ ಬರುವ; ನೋಡುವಿಯಂತೆ.

ಶ್ರೀಧರ:— (ದೀರ್ಘನಿಶ್ವಾಸವನ್ನೆಳೆದು ಕೊಂಚ ನಿರಾಶೆಯ, ಕೊಂಚ ಆಶ್ಚರ್ಯದ, ಕೊಂಚ ತಿರಸ್ಕಾರದ ಮುದ್ರೆತಾಳಿ ನಿಲ್ಲುವನು).

(ಸೆಟ್ಟಿಯು ಬರುವನು. ಸೆಟ್ಟಿಯೆಂದರೆ ಬಡವರ ಜಟ್ಟಿ ಎಂದು ಬಲ್ಲವರಿಗೆ ಸೆಟ್ಟಿಯು ಇಂತಿಂತು ಎಂದು ಬಣ್ಣಿಸುವ ಕಾರಣವೇ ಇಲ್ಲ. ಆದರೂ ನಮಗೆ ಬಣ್ಣಿಸಬೇಕಾಗಿದೆ. ಇದೇನು ಹಾಳು-ಹರಟೆ ಎಂದು ನೀವು ಕೋಪಿಸಿಕೊಳ್ಳುವದಾದರೆ ನಿರುಪಾಯವಾಗಿ ನಾವು ಯಾಕೆ ಬಣ್ಣಿಸುವೆವೆಂಬುದರ ಕಾರಣವನ್ನು ಹೇಳಲೇಬೇಕಾಗುವದು. ನಮ್ಮ ವ್ಯವಸಾಯ-ಬಂಧುಗಳ ಕ್ಷಮೆ ಕೋರುವೆವು. ನಾವು ಬರೆಹಗಾರರು. ಸೆಟ್ಟಿಯ ಬಣ್ಣನೆಯನ್ನು ನಾವು ಬರೆಯದಿದ್ದರೆ ತಾನು ಬರೆದಿಟ್ಟ ಲೆಕ್ಕವನ್ನು ಸೆಟ್ಟಿಯು ತೆರೆದಿಡುವನು. ಸೆಟ್ಟಿಯ ಸಿಟ್ಟು ಎಂದರೆ ನಮ್ಮ ರೊಟ್ಟಿಗೆ ಕಟ್ಟು. ಹಾ, ನಗಬೇಡಿ. ಸೆಟ್ಟಿಯು ಬಂದೇಬಿಟ್ಟನು. ನೋಡಿದಿರಾ ಅವನ ಮಾಸಿದ ಬಟ್ಟೆ, ಅವನ ಆ ಡೊಳ್ಳು ಹೊಟ್ಟೆ; ಬಡವರ ಬಯಕೆಗಳು ಅವನ ಬಟ್ಟೆಯಲ್ಲಿ, ಬಡವರ ಜೀವವು ಅವನ ಹೊಟ್ಟೆಯಲ್ಲಿ.)

ಜೋಯಿಸ:— ಏನು ಸೆಟ್ಟರೆ, ಇಷ್ಟು ತೀವ್ರ ಬಂದುಬಿಟ್ಟಿರಿ ಅಂಗಡಿಯಿಂದ.

ಸೆಟ್ಟಿ:— ಜೋಯಿಸರೆ, ಅಂಗಡಿ ಎಂದರೆ ಒಡೆದ ಸಗಡಿ ಆಗಿ ಹೋಗಿದೆ. ಅದನ್ನು ಕಟ್ಟಿಕೊಂಡು ಮುಳುಗಿದರೆ ಸೈ. ಕಚ್ಚಾ ಮಾತಲ್ಲ ಇದು. ಗಿರಾಕಿ ಅಂದರೆ ಬರೀ ಬಾಕಿ. ನಮ್ಮ ಖಾತೆಗೆ ಖರ್ಚು ಹಾಕಿರಿ ಎಂದು ಹೇಳಿ ಜಿನ್ನಸ ಒಯ್ದವರು ನನ್ನ ಕೈಖರ್ಚು ಮಾಡಿದರೂ ಪತ್ತಾ ಇಲ್ಲ. ಊರೊಳಗೆ ಮದಿವೆ ಇಲ್ಲ, ಉಪನಯನ ಇಲ್ಲ, ಸಾಯುವದಿಲ್ಲ, ಕೆಡುವದಿಲ್ಲ. ಜೋಯಿಸರೆ ನಮ್ಮ ಕಾಲ ಮುಗಿಯಿತು; ಇನ್ನೇನು ಆ ದೊಡ್ಡಿಸ್ತನದ ಜನರು ಸಿಕ್ಕೋದಿಲ್ಲ. ಈಗಿನ ಜನರನ್ನು ನೋಡಿರಿ, ಆಶೀರ್ವಾದ ಕೊಡು ಎಂದರೆ ಒಡ್ಡಿ ಎಷ್ಟು ಕೊಡುವೆ ಅಂತಾರೆ. ಹಹಹ. ಕಚ್ಚಾ ಮಾತಲ್ಲ ಇದು. ಅದಿರಲಿ ಜೋಯಿಸರೆ, ನಿಮ್ಮ ಕಡೆಗೆ ಬರಬೇಕಾಗಿದೆ.

ಜೋಯಿಸ:— ಯಾಕೆ?

ಸೆಟ್ಟಿ:— ಯಾಕೇನು? ಉದ್ಧರಿಯ ವಸೂಲಿ, ಧಾರಣೆ ಬೆಳೆಯುವದು ಎಲ್ಲ ತಿಳಿದುಕೊಳ್ಳಬೇಕಾಗಿದೆ.

ಜೋಯಿಸ:— (ವಿಷಾದ ತೋರಿಸುತ್ತ) ನನ್ನದೇ ದುರ್ದೈವ. ಏನು ಮಾಡಲಿ ಸೆಟ್ಟರೆ, ನಿಮಗೆ ಬೇಕಾದ್ದನ್ನು ಹೇಳಿಕೊಡುತ್ತಿದ್ದೆ. ಆ—ದ—ರೆ—

ಸೆಟ್ಟಿ:— (ಸಂಶಯದಿಂದ) ಆದರೇನು?

ಜೋಯಿಸ:— (ಗಟ್ಟಿಯಾಗಿ) ಇಂದಿನಿಂದಲೇ ಈ ಊರನ್ನು ಬಿಟ್ಟುಕೊಡಬೇಕಾಗಿದೆ.

ಸೆಟ್ಟಿ:— (ಹೆದರಿಕೆಯಿಂದ) ಯಾಕೆ?

ಜೋಯಿಸ:— ಈ ದುರ್ಭಿಕ್ಷೆಯಲ್ಲಿ ಬಡಬ್ರಾಹ್ಮಣನ ಸಂಸಾರ ನಡೆಯುವದು ಹೇಗೆ?

ಸೆಟ್ಟಿ:— (ಹೆಮ್ಮೆಯಿಂದ) ಹೆ!, ಅದಕ್ಕೇನು ಕೊರತೆ ಈ ಊರೊಳಗೆ ನಾನು ಸೆಟ್ಟಿ ಇರುವತನಕ? ಕಚ್ಚಾ ಮಾತಲ್ಲ ಇದು. ಇರಲಿರಲಿ, ಅಂಗಡಿ ಕಡೆಗೆಯೆ ಬಂದುಬಿಡಿ ಮಧ್ಯಾಹ್ನಕ್ಕೆ. (ಕೈಮುಗಿದು ಮುಗುಳುನಗೆಯಿಂದ ಶ್ರೀಧರನನ್ನು ನೋಡುತ್ತ ಹೋಗುವನು).

ಜೋಯಿಸ:— (ದರ್ಪದಿಂದ) ಯಾಕೆ, ಹೇಗಿದೆ?

ಶ್ರೀಧರ:— (ತಲೆ ಅಲ್ಲಾಡಿಸುತ್ತ) ಕಷ್ಟಸಾಧ್ಯ.

ಜೋಯಿಸ:— (ನಗೆಯಿಂದ) ಕಷ್ಟಸಾಧ್ಯವಲ್ಲಪ್ಪಾ. (ಹತ್ತಿರ ಬಂದು ಮೆಲ್ಲಗೆ) ಹೇಳಿಕೊಡಲಿಯಾ ಗುರುಮಂತ್ರ? ಜನರ ಸ್ವಭಾವ ಗೊತ್ತಿರಬೇಕು ನೋಡು. ನಮ್ಮ ಜನರಿಗೆಲ್ಲ ನಾಳಿನ ಗತಿ ಹೇಗೆ, ಮುಂದಿನ ಗತಿ ಹೇಗೆ ಎಂಬುವದೊಂದು ಹುಚ್ಚು. ನಾಳೆ ಹೊಟ್ಟೆ ತುಂಬುವದೊ ಇಲ್ಲವೊ ಎಂದು ಕೇಳಲಿಕ್ಕೆ ಇಂದು ನನ್ನ ಹೊಟ್ಟೆ ತುಂಬಿಸುವದು ಈ ಜನ. ಹೊತ್ತಾಯಿತು ಹೋಗಿ ಬರುವೆ. (ನಗೆಯಿಂದ) ನಾಳೆ ಏನಾದೀತು ಎಂದು ತಿಳಿದುಕೊಳ್ಳಬೇಕಾದರೆ ಬಂದು ಕೇಳಬಹುದು—ದಕ್ಷಿಣಾ ಇಟ್ಟು. (ಹೋಗುವನು).

ಶ್ರೀಧರ:— (ಲಕ್ಷ್ಯವಿಲ್ಲದೆಯೆ) ನಾಳೆ ಏನಾದೀತೂ ಅಂತೆ! ಅಯ್ಯೋ, ಹುಚ್ಚ ನಾನು. ಇಂದು ನೆಮ್ಮದಿ ತಿಂದು ನಾಳಿನ ದೇನು ಗೋಳು ಎಂದು ಚಿಂತೆ ಅಲ್ಲವೆ ನನಗೆ? ಆದರೆ, ಇಂದಿನ ಇಂದು ತಿಂದೇನೆಂದರೆ ಸಂಜೆಗೆ ಗಂಜಿ ಇಲ್ಲ, ತೊಟ್ಟೇನೆಂದರೆ ಬೊಟ್ಟು ಬಟ್ಟೆ ಇಲ್ಲ, ಹೀಗೆ ಕಾಳಪ್ಪ

ಸಂತೆ ಸಾಯಲಾರದೆ ಬದುಕಿನ ಬೆಂಕಿಯೊಳಗೆ ಬೆಂದು ಹೋಗುವ ಎಷ್ಟು ಜನ ಇರಲಿಕ್ಕಿಲ್ಲ ನಮ್ಮ ಸಮಾಜದೊಳಗೆ!—ಏನು ಕಲಿತೆನಪ್ಪಾ ಇತಿಹಾಸ!—ನಮ್ಮ ದೇಶ ಸುವರ್ಣಭೂಮಿ ಅಂತೆ! ಸುವರ್ಣಕಾರನ ಭೂಮಿ ಆಗಿದೆ ನಮ್ಮ ದೇಶ; ಬಡತನದ ಬೂದಿಯಿಂದ ಮುಚ್ಚಿ, ಅಜ್ಞಾನದ ಇದ್ದಲಿಯಿಂದ ಕಪ್ಪಾಗಿಹೋಗಿದೆ ಸಮಾಜವೆಲ್ಲ. ಅಯ್ಯೊ, ಕೊನೆಗೆ ಬೆಂದು ಬೆಂದು ಒಂದಾಗಿ ಬಂಗಾರದಂತೆ ಮಿಂಚಿ ಹೊರಬೀಳುವ ಯೋಗ್ಯತೆ ಇದೆಯೆ ನಮ್ಮಲ್ಲಿ? (ಮುಂದೆ ನಡೆಯುತ್ತ) ನನ್ನ ಗೆಳೆಯನಿಗೆ ಹೇಳಿಬಿಡುವೆ, ಇಂದಿನಿಂದ ಮುಂದಿಗಾಗಿ ಹೆಣಗಾಡುವೆ ಎಂದು.—ಸಂಸಾರ ಸಾಗರ; ಸಮಾಜ ಹಡಗ; ಬುಡಮೇಲಾದ ಈ ಹಡಗಿನ ಕೆಳಗೆ ಹೆಡೆ ಇಲ್ಲದ ಶೇಷನ ಹಾಗೆ ಸಿಕ್ಕು ಒದ್ದಾಡುವೆವು ನಾವಿಂದು. ಎಲ್ಲರೂ ಮುಳುಗುವಾಗ್ಗ ಒಬ್ಬನೇ ಉಳಿಯುವದೆಂದರೆ ಕೊಳೆಯುವದೆ. (ಮುಂದೆ ನೋಡಿ) ಇದೇನು, ವಿಚಾರ ಮಾಡುತ್ತಾ ಬಂದೇಬಿಟ್ಟೆನಲ್ಲ ಉದ್ಯಾನಕೆ!

(ತೆರೆಯು ಮೇಲಕ್ಕೇಳಲು ಉದ್ಯಾನವು ಕಂಗೊಳಿಸುವದು. ಇದೀಗ ಪ್ರಾತಃಕಾಲದ ನಾಲ್ಕು-ನಾಲ್ಕು ವರೆತಾಸಿನ ಸಮಯವೆಂಬುದನ್ನು ಸ್ಮರಣೆಗೆ ತಂದುಕೊಟ್ಟರೆ ಉದ್ಯಾನವು ಕಂಗೊಳಿಸಬಹುದೆ? ಎಂದು ಪ್ರೇಕ್ಷಕರಲ್ಲಿ ಕೆಲವರಿಗೆ ಸಂಶಯ ಬರಬಹುದು. ಸಹಜವಿದೆ. ನಾಟಕದಲ್ಲಿಯಾಗಲಿ ವ್ಯವಹಾರದಲ್ಲಿಯಾಗಲಿ ಉದ್ಯಾನ ಶೋಭೆಯು ಸಾಮಾನ್ಯವಾಗಿ ಕಾಣಬರುವದು ಸಂಧ್ಯಾಕಾಲದಲ್ಲಿಯೆ. ಎದ್ದಂದಿನಿಂದ ಇದ್ದುದಕ್ಕೆ ಗುದ್ದಾಡುವ ಹತಾಶ ಸಂಸಾರಿಗನಿಗೆ ಮುಂಜಾವಿನ ಉದ್ಯಾನವೆಲ್ಲಿಂದ ಬರಬೇಕು? ಉಪಜೀವನದ ಉಪಕರಣಗಳನ್ನು ಒದವಿಸುವ ಮುಂಜಾವಿನಲ್ಲಿ, ಮಕ್ಕಳ ಮರುಳಾಟದಿಂದ ಮೂಲೆಮೂಲೆ ಮುರಿದುಬಿದ್ದಂತೆ ಮನೆಯು ಕಾಣುವ ಮುಂಜಾವಿನಲ್ಲಿ, ಮನಸ್ಸೊಪ್ಪದ ಕೆಲಸಿನ ಹನ್ನೆರಡುತಾಸು ಹಗಲಿನ ಘೋರಶಿಕ್ಷೆಯನ್ನು ವಿಧಿ

ಸಾವ ಮುಂಜಾವಿನಲ್ಲಿ,—ಮುನ್ನ ರಾತ್ರಿ ಚಿನ್ನದ ಗೊಂಬೆಯಂತೆ ಕಂಡ ಹೆಂಡತಿಯು ಅನ್ನ ಪಾತ್ರದ ಸಿಂಬೆ ಮಾತ್ರವಾಗಿ ಕೀಳೆನ್ನಿಸುವಂತೆ—ಮುಂಜಾವಿನ ಉದ್ಯಾನಕ್ಕೆ ಶೋಭೆ ಎಲ್ಲಿಯದು?—ಆದರೆ ಶ್ರೀಧರನು ಸಾವಕಾಶವಾಗಿ ನಡೆಯುತ್ತಿರುವದನ್ನು ನೋಡಿದರೆ ಇಷ್ಟರಲ್ಲಿಯೆ ಅವನಿಗೆ ಉದ್ಯಾನದ ಅರಿವು ಮರೆತಂತೆ ತೋರುವದು. ಎಡಕ್ಕೆ ಕೆಲವು ಆಸನಗಳಿದ್ದರೂ, ಅಲ್ಲಲ್ಲಿ ಹೂ-ಬಳ್ಳಿಗಳು ಸೊಕ್ಕಿನ ಸಿರಿಯಂತೆ ಸಿಕ್ಕು-ಸಿಕ್ಕಲ್ಲಿ ಉದುರಿಬೀಳುತ್ತಿದ್ದರೂ ಅವನ ಲಕ್ಷ್ಯವಿಲ್ಲ ಅವುಗಳ ಕಡೆಗೆ. ಆತನ ತಲೆಯಲ್ಲಿ ಆವುದೋ ಒಂದು ಗಹನವಿಚಾರವಿದ್ದಂತೆ ತೋರುವದಲ್ಲವೆ ?)

ಶ್ರೀಧರ:— (ಒಮ್ಮೆಲೆ ನಿಂತು, ತಿರಸ್ಕಾರದಿಂದ) ಭವಿಷ್ಯಪತ್ರ ಬೇಕಾಗಿತ್ತಲ್ಲವೆ ನನಗೆ? ಹುಚ್ಚಾ, ಶ್ರೀಧರಾ, ಯುವಕ ನೀನು. ಕಯ್ಯಲ್ಲಿ ಶಕ್ತಿ, ಎದೆಯಲ್ಲಿ ಉತ್ಸಾಹ ಬೇಡವೆ ನಿನಗೆ? ಆಧಾರಸ್ತಂಭನಲ್ಲವೆ ಸಮಾಜಕ್ಕೆ ನೀನು? ನೀನೊಬ್ಬನೆ ಬಲಿತು, ಉಳಿದ ಸ್ತಂಭ ಹುಳತಿಂದರೆ ತತ್ತರಿಸಬಹುದಲ್ಲವೆ ನಿನ್ನ ಸಮಾಜ? ಅದೊ, ನೋಡು; ಉಳಿದ ಯುವಕರನ್ನು ಕೂಡು; ಕೀಳಾಗಿಲ್ಲವೆ ನಿನ್ನ ಸಮಾಜದ ಹಾಡು; ಏಳು, ಅದನ್ನು ಸರಿಮಾಡು.

(ಪ್ರೇಕ್ಷಕರೆ, ಇನ್ನು ಮೇಲೆ ಶ್ರೀಧರನ ಶರೀರವನ್ನು ಸೇರಿಕೊಂಡು ಅದರಲ್ಲಿಯ ಮನಸ್ಸನ್ನು ನೋಡಬೇಕೆ ಹೊರತಾಗಿ ನಮ್ಮಂತಹ ಅದ್ವಿತೀಯ ಬರೆಹಗಾರರಿಗೆ ಕೂಡ ಬರಿಯ ಅದನ್ನು ಬಣ್ಣಿಸುವದು ಶಕ್ಯವಿಲ್ಲ. ಶಂಕರಾಚಾರ್ಯರ ಆಣೆ ಇಟ್ಟುಕೊಂಡು ಶ್ರೀಧರನ ಶರೀರವನ್ನು ಒಳಹೊಗುವಾ. ಅಯ್ಯೊ, ಆಶ್ಚರ್ಯ! ತರುಣರ ಹಿಂಡಿಗೆ ಹಿಂಡಾಗಿಯೆ ಕಂಡುಬರುವದಲ್ಲವೆ ? ಏನು ಅವರ ಸ್ಥಿತಿ! ಮುಖಕ್ಕೆ ಕಳೆ ಇಲ್ಲ, ಮೈಗೆ ಬೆಳೆ ಇಲ್ಲ; ಕೇಳಿರಿ, ಶ್ರೀಧರನ ಹಾಡಿನಿಂದ ಹುರುಪುಗೊಂಡು ಈ ಕಂಗಾಲರು ಹಾಡುವದನ್ನು!)

ಶ್ರೀಧರ:— (ತನ್ನಲ್ಲಿಯೆ)

ನಡೆವಾ, ಜೀವ ಕೊಡುವಾ,
ದುಃಖ ಪಡುವಾ, ಆನಂದದಿ।

ಸುಡುವಾ ದೇಹ, ಬಿಡುವಾ ಮೋಹ,
ತಿಳಿಯೈ ಸಾವು ಸಲೆ ದಾರಿದ್ರ್ಯದಿ ॥

ಎಲ್ಲರು:— ನಡೆವಾ, ಜೀವ ಕೊಡುವಾ,
ದುಃಖಪಡುವಾ, ಆನಂದದಿ ।
ಸುಡುವಾ ದೇಹ, ಬಿಡುವಾ ಮೋಹ,
ತಿಳಿಯೈ ಸಾವು ಸಲೆ ದಾರಿದ್ರ್ಯದಿ ॥

ಶ್ರೀಧರ:— ನೋಡು ನೋಡು ದಾರಿಯ ಬದಿಯ
ಬೇಡುವವರೆ ಮುತ್ತಿಹರಯ್ಯ ।
ನೀಡಲಾರೆ ದೂಡಲಾರೆ
ಕಾಡನಾಗಿ ಬಾಳುವಕಿಂತ ॥

ಎಲ್ಲರು:— ನಡೆವಾ, ಜೀವ ಕೊಡುವಾ,
ದುಃಖಪಡುವಾ, ಆನಂದದಿ ।

ಒಂದುಸಾಲು:—ಸುಡುವಾ ದೇಹ,

ಮತ್ತೊಂದು ಸಾಲು:— ಬಿಡುವಾ ಮೋಹ,

ಎಲ್ಲರು:— ತಿಳಿಯೈ ಸಾವು ಸಲೆ ದಾರಿದ್ರ್ಯದಿ ।

ಶ್ರೀಧರ:— ನಿನ್ನದೆಂದು ಹೇಳಲು ಎಲ್ಲ
ನಿನಗಿನ್ನು ಕೇಳುವರಿಲ್ಲ ।
ನಿನ್ನ ಕೋಳು ದುಡಿಯುವದಲ್ಲ
ಒಂದು ಕಾಳು—ಕಡಿ ನಿನಗಿಲ್ಲ ॥

ಎಲ್ಲರು:— ನಡೆವಾ (ಮುಂತಾಗಿ ಮೊದಲಿನಂತೆಯೆ).

(ಒಮ್ಮೆಲೆ ಎಲ್ಲ ತರುಣರು ಮಾಯವಾಗುವರು. ಶ್ರೀಧರನು ಎಚ್ಚತ್ತವನಂತೆ "ಎಲ, ಇದೇನು" ಎಂದು ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡು ಒಂದು ಆಸನದಲ್ಲಿ

ನ್ನೈ ಮರೆತವನಂತೆ ಕುಳಿತುಕೊಳ್ಳುವನು. ಇಷ್ಟರಲ್ಲಿ Hello, good-morning ಎಂಬುದೊಂದು ಗಂಭೀರಸ್ವರವೂ ಅದರೊಡನೆಯೆ ಮೋಹಿಸುವ ಮುಗುಳುನಗೆಯು ಯುವಕನ ಮುಖವೊಂದೂ ಮಿಂಚಿನಂತೆ ಶ್ರೀಧರನ ಹಿಂಬದಿಯಿಂದ ಕಂಗೊಳಿಸು ವವು. ಶ್ರೀಧರನು ಒಮ್ಮೆಲೆ ಮುಖವನ್ನು ಮೇಲಕ್ಕೆತ್ತಿ ಹಿಂತಿರುಗಿ ಲಗಬಗೆಯಿಂದ ಎದ್ದು ಕಯ್ಯಲ್ಲಿ ಕೈಕೊಟ್ಟು, ಹೆದರಿದವನು ಅಕಲ್ಪಿತ ಸಹಾಯದೊರೆತ ವೇಳೆಗೆ ತೋರಿಸುವ ಕೃತಜ್ಞತಾಯುಕ್ತಸ್ವರದಲ್ಲಿ—)

ಶ್ರೀಧರ:— Good-morning, ಕೊಂಕಣ್ಣಾ.

(ಎಚ್ಚರಿಕೆ! ತುವಾಗಿಯೆ ಎಚ್ಚರಿದ್ದ ಪ್ರೇಕ್ಷಕರಿಗೆ ವಿಶೇಷವಾಗಿ ಜಾಗ್ರತೆ; ಕೊಂಕಣ್ಣನೆಂಬುದು ಈ ಯುವಕನ ಗೆಳೆಯರಿಟ್ಟ ಹೆಸರು. ನಾವು ನಡ-ನಡುವೆ ಇಂತಹ ಹಾಳು-ಹರಟೆ ಕೊಚ್ಚಲೇಬೇಕಾಗುವದು, ಕಾರಣ ಕ್ಷಮೆ ಇರಲಿ. ಇಲ್ಲವಾ ದರೆ "ಕೊಂಕಣ್ಣ"ವೆಂಬ ಹೆಸರು ಕೇಳಿದ ಮಾತ್ರಕ್ಕೆ ಬೃಹನ್ಮಹಾರಾಷ್ಟ್ರಮಠದ ನಮ್ಮ ಮರಾಠಿ ಬಂಧುಗಳು ಈ ಯುವಕನು, ಅವನ ತಂದೆ-ತಾಯಿ, ಏಳು-ತಲೆಯು ಅವನ ಬಂಧು ಬಳಗ ಮತ್ತು ಅವನ ದೇಶವೆಲ್ಲ ಮಹಾರಾಷ್ಟ್ರದ ಒಂದು ಭಾಗವೆ ಇದೆಯೆಂದು ಹೇಳಬಹುದು; ಅದಕ್ಕೆ ಪ್ರತ್ಯುತ್ತರವಾಗಿ "ಕೊಂಕಣ್ಣ"ವೆಂಬ ಹೆಸ ರಿನ ಕನ್ನಡಿಗನಿದ್ದುದರಿಂದ ಕೊಂಕಣವೆಲ್ಲ ಕರ್ನಾಟಕಕ್ಕೆ ಸೇರಿದುದು ಎಂದು ನಮ್ಮ ಕನ್ನಡಬಂಧುಗಳು ಹಟತೊಡಬಹುದು. ನಿರರ್ಥಕ ವೈಮನಸ್ಯವನ್ನು ಹುಟ್ಟಿಸುವ ಇಂತಹ ಉನ್ಮಾದವಾಗಬಾರದೆಂಬ ಸದಿಚ್ಛೆಯಿಂದಲೆ ನಾವಿದನ್ನು ಹೇಳುವದು. ಇನ್ನು ಕೊಂಕಣ್ಣನ ವಿಷಯುವಾಗಿಯು ಹೇಳುವಂತಹ ವೈಶಿಷ್ಟ್ಯವೆನಿಲ್ಲ. ಶ್ರೀಧರನ ಸಮಾನವಯಸ್ಕನು. ಸ್ವಚ್ಛತೆಯ ಕಲ್ಪನೆಯು ಅವನ ಬುದ್ಧಿಯ ತವರ್ಮನೆಯೊ ಏನೊ ಎನ್ನುವಂತೆ ತಲೆಗಾಲು ಶುಭ್ರವಾದ (ಖಾದಿಯೆ ಇರಬಹುದು) ಬಟ್ಟೆಯುನ್ನು ಟ್ಟಿರುವನು.)

ಕೊಂಕಣ್ಣ:— (ನಗುತ್ತಲೆ ಮುಂದೆಬಂದು) ಇದೇನು, ಕಣ್ಣುಮುಚ್ಚಿ ಸೃಷ್ಟಿ ಶೋಭೆ ನೋಡುವ ಹೊಸ ವಿದ್ಯೆಯೊ, ಏನು nature is blind ಎನ್ನುವ ತತ್ವದ ಧ್ಯಾನವೊ?

ಶ್ರೀಧರ:— (ಹತಾಶನಂತೆ) ಕೊಂಕಣ್ಣಾ, ಮುಚ್ಚಿದ ಕಣ್ಣು ತೆರೆಯುವ ಯೋಗಾಭ್ಯಾಸವಿದು.

**ಕೊಂಕಣ್ಣ:—** ಛೆ, ಶ್ರೀಧರಾ, ಈ ನಿನ್ನ ನಿರುತ್ಸಾಹದ ನಡತೆ ಬಿಟ್ಟು ಸಿಕ್ಕದ್ದೆಲ್ಲ ಸರಿಹೋಗುವದು ನೋಡು ನನಗೆ. ಅಲ್ಲೊ, ಹಸಿದು ಊಟಮಾಡಿ, ದಣಿದು ನಿದ್ದೆಮಾಡಿ ಸುಖದಿಂದ ಬಾಳಿರದೆ?

ಶ್ರೀಧರ:— (ತತ್ವಜ್ಞಾನಿಯಂತೆ) ಸುಖವೆಂಬುವ ಶಬ್ದ ಮನಸ್ಸು ಮಂಕು ಮಾಡುವ ನಾಲಗೆಯದೊಂದು ಮೋಸ. ಹಸಿವೆಯಾದ ಕಾಲಕ್ಕೆ ಸರಿಯಾಗಿ ಊಟ ಸಿಕ್ಕುವದೆಂದು ತಿಳಿದಿರುವೆಯೇನೊ?

**ಕೊಂಕಣ್ಣ:—** ಎಲೊ, ಮನುಷ್ಯ ಮಂಗನಿಂದ ಹುಟ್ಟಿದ ಎಂಬೋದಕ್ಕೆ ನಿನ್ನ ಮಂಗ–ಬುದ್ಧಿಯೆ ಸಾಕ್ಷಿ ನೋಡೊ. ಎಂದಿನ ಸಲುವಾಗಿಯೊ ವಿಚಾರ ಮಾಡಿ ಇಂದಿನ ಊಟದ. ವೇಳೆಯನ್ನು ಯಾಕೆ ತಪ್ಪಿಸಿಕೊಳ್ಳಬೇಕು ಹೇಳು ನೋಡುವ. ನಾ ಬಲ್ಲೆ ನಿನ್ನ ಗೋಳು. ಇಷ್ಟೊಂದು ಕಲಿತು ಕೆಲಸ ಸಿಕ್ಕಲಿಲ್ಲ ಅಂತೆ ಒಂದು, ಕೆಲಸ ಸಿಕ್ಕದೆ ಹೊಟ್ಟೆ ತುಂಬುವದು ಹೇಗೆ ಅಂತೆ ಒಂದು, ಹೀಗೆ double degree ಗೋಳು ನಿನ್ನದು. ಅಲ್ಲೊ, ಶ್ರೀಧರಾ, ನಾನು ಹೇಳಿದ ಹಾಗೆ ಮಾಡದಿದ್ದರೆ ನಾನು ಮಾಡುವದು ಹೇಗೆ ಎಂಬುವದಾದರೂ ನೋಡಬಾರದೆ? ನಾನೂ ನೀನೂ ವ್ಯವಸಾಯಬಂಧುಗಳು–ಅಂದರೆ ಇಬ್ಬರಿಗೂ ವ್ಯವಸಾಯ ಇಲ್ಲಾ ಅಂತೆ ತಾತ್ಪರ್ಯ. ಆದರೂ ನನಗೆ ನಾಳಿನೂಟಿನ ಕಾಳಜಿ ಇಲ್ಲ, ಇಂದಿನೂಟ ಎಂದಿಗೂ ತಪ್ಪಿಲ್ಲ.

ಶ್ರೀಧರ:— (ಆಸನದಲ್ಲಿ ಕುಳಿತುಕೊಳ್ಳುತ್ತ) ಅದೆಂತಹದಪ್ಪಾ ನಿನ್ನ ಸಾಧನೆ?

ಕೊಂಕಣ್ಣ:— (ನಗೆಯಿಂದ) ಅದೇ ನಾ ನಿನಗೀಗ ಮಾಡುವ ಬೋಧನೆ ಇದು ನೋಡು, ಈಗೊಂದು ನಿಮಿಷ ನಾನೂ ನೀನೂ ಇಂಗ್ಲಿಶ ಕಲಿತವರಲ್ಲ ಎಂದು ತಿಳಿ. Decency, liberty order, progress ಈ ವಿಚಾರ ಗೊತ್ತಿಲ್ಲ ಎಂದು ತಿಳಿ; **ये यथा मां प्रपद्यन्ते** ಎಂಬುವದು ಸಾಕ್ಷಾದ್ಭಗವಂತನ ವಾಕ್ಯ ಎಂದು ಇದೂ ಒಂದು ತಿಳಿ; ಇನ್ನು ಕೇಳು. ನಾನು ಏನು ಮಾಡುವೆ ಗೊತ್ತಿದೆಯೆ? ಅಧ್ಯಯನ ಮುಗಿದ ಮೇಲೆ ಕೆಲಸ ಹಿಡಿಯಬೇಕು ಎಂಬುವದು ಪಾಶ್ಚಿಮಾತ್ಯ ಸಂಸ್ಕೃತಿ; ಅಧ್ಯಯನ ಮುಗಿದ ಮೇಲೆ ಮುಂದಿನ ಹೆಜ್ಜೆ ಗೃಹಸ್ಥಾಶ್ರಮ ಎನ್ನುವದು ನಮ್ಮ ಸಂಸ್ಕೃತಿ. **ये यथा मां प्रपद्यन्ते** ಎಂದು ಗೃಹಸ್ಥಾಶ್ರಮದ ಹಂಚಿಕೆ ನಡೆಯಿಸಿರುವೆ. ದಿನಾಲು ಎರಡು, ಏನಿಲ್ಲೆಂದರೂ ಒಂದು ಕನ್ಯಾ ನೋಡ ಹೋಗುವದು. ಎರಡಕ್ಕಿಂತ ಹೆಚ್ಚು ಮಾತ್ರ ನೋಡಕೂಡದು. ಉದ್ದಿಶ್ಯವೇನು? ಮುಂದಿಟ್ಟ ಚಹಾ ಫರಾಳ ಸಮೀಚೀನ ನೆಗಹುವದು. ನೋಡು; ಎರಡು ಕನ್ಯಾ ನಿರೀಕ್ಷಣ, ಎರಡು ಚನ್ನಾದ ಭಕ್ಷಣ. ಚರಿತಾರ್ಥ ಸಾಗಿಸಬೇಕೆಂಬುವ ಪಾಶ್ಚಾತ್ಯಸಂಸ್ಕೃತಿ, ಗೃಹಸ್ಥಾಶ್ರಮ ಸೇರಬೇಕೆನ್ನುವ ನಮ್ಮ ಸಂಸ್ಕೃತಿ, ಎರಡೂ ಕೂಡಿಸಿ ಮತ್ತೆ **कन्यासंग्रहमेवापि संपश्यन्भोक्तुमर्हसि** ಎಂದು ಹಾಡುವದು.

ಶ್ರೀಧರ:— (ತಲೆ ಅಲ್ಲಾಡಿಸುತ್ತ) ಕೊಂಕ, ಇದು ನಿನ್ನ ವಿನೋದ, ಅಲ್ಲದೆ ಇಂತಹ ಅನ್ಯಾಯದ ಕೆಲಸ ನೀ ಮಾಡೀ ಎಂದು—

**ಕೊಂಕಣ್ಣ**:— ಅನ್ಯಾಯ! ಶ್ರೀಧರ, ಹುಚ್ಚ ನೀನು. ಮನಸ್ಸು ಒಂದರೆ ಮದಿವೆ ಮಾಡಿಕೊಳ್ಳತೇವೆ. ಮುಖ್ಯ, ಮನಸ್ಸು ಬರಬೇಕಲ್ಲವೆ? ಸತ್ತವರಿಗಾಗಿಯೆ यद्रोचते तद् ग्राह्यं यन्न रोचते तत् त्याज्यं ಎಂದು ಹೇಳಬೇಕು, ಇದ್ದವರಿಗೆ— ಇರಬೇಕೆನ್ನುವವರಿಗೆ ಹೇಳಬಾರದೆಂದರೆ ಅದೇ ಅನ್ಯಾಯ ವಲ್ಲವೆ?

ಶ್ರೀಧರ:— ಏನೊ, ನಿನ್ನ ಮಾತು ಸರಿಬೀಳುವದಿಲ್ಲ ನೋಡು ನನಗೆ. ನಿನ್ನಂತಹಾ ತರುಣ ಎರಡನೆಯವರ ಅನ್ನ ಉಂಡು ಮೆರೆ ಯುವದು ಮಾನಕ್ಕೆ ಸಾಲುವದೆ?

**ಕೊಂಕಣ್ಣ**:— ಅದಕ್ಕೇ ನಾನು ಹೇಳುವದು ನಿನಗೆ ವ್ಯವಹಾರಬುದ್ಧಿ ಇಲ್ಲಾ ಅಂತೆ; business point of viewದಿಂದ ನೋಡ ಬಾರದೆ? ಈ ತಿಂದದ್ದೆಲ್ಲ ಋಣ ಎಂದು ತಿಳಿದುಕೊಂ ಡರೂ ನಾಳೆ ಎಲ್ಲಿಂದಲೊ ಒಂದು ಹುಡುಗೆಯನ್ನು ತಂದು ಸಾಯುವವರೆಗೆ ಆವಳನ್ನು ಉಣ್ಣಿಸಿ ಬೆಳಿಸಿದರೆ ತೀರದೊ ಆ ಋಣ? ಅದೇಕೆ, ಅವಳಲ್ಲಿ ಹುಟ್ಟಿದ ಮಕ್ಕ ಳನ್ನು ಬೆಳೆಯಿಸಿದರೆ ಬಡ್ಡಿ ಸಹಿತ ಸಾಲು ತೀರುವದೆಂದು ನನ್ನ ದೃಢವಾದ ಕಲ್ಪನೆ. ಅದಿರಲಿ, ನಿನಗಾಗಿ ಹೇಳುವ ಅಭಿಪ್ರಾಯ ಕೇಳಿಕೊ. ನೀನೇನು practical ಮನುಷ್ಯನಲ್ಲ, ನನ್ನಂತೆ ಮಾಡುವದು ನಿನಗೆ ಸಾಧ್ಯವೆ ಅಲ್ಲ. ಕಾರಣ, ಎಲ್ಲಿಯಾದರೂ ನೆಮ್ಮದಿಯಾಗಿ ವರ ದಕ್ಷಿಣೆ ಎಬ್ಬಿಸು. ಒಮ್ಮೆ ಸ್ಥಿರವಾಗಿ ಸಂಸಾರ ಹೂಡಿ ದೆಯೆಂದರೆ ನಿನ್ನ ಸಮಾಜಸೇವಾ, ದೇಶಸೇವಾ ಎಲ್ಲ ಸುಲಭ ನೋಡು. Within the hollow of your

palm. ಮುಂಗೈ ಮುಷ್ಟಿಯಲ್ಲಿ ಮಾತ್ರ. (ಕುಳಿತುಕೊಳ್ಳುವನು).

ಶ್ರೀಧರ:— (ವಿಚಾರಿಸುತ್ತ) ನೀನು ಹೇಳುವದೇನೊ ತರ್ಕಕ್ಕೆ ಸರಿಯಾಗಿ ಅರ್ಥವಾಗತದೆ. ದುಡ್ಡಿಲ್ಲದೆ ಹೊಟ್ಟೆ ತುಂಬುವದಿಲ್ಲ, ಹೊಟ್ಟೆ ತುಂಬದೆ ಉತ್ಸಾಹ ತುಳುಕುವದಿಲ್ಲ, ಉತ್ಸಾಹತುಳುಕದೆ ಸತ್ಕಾರ್ಯಸಿದ್ಧಿಯಿಲ್ಲ.ಆ-ದ-ರೂ-

ಕೊಂಕಣ್ಣ:— ಆದರೂ—ಏನೊ? ಎಲ್ಲಕ್ಕೂ ದುಡ್ಡು ಅವಶ್ಯ ಎಂಬುವ ಮಾತು ಇಬ್ಬರಿಗೂ ಇಷ್ಟ. ಆದರೂ ನೀನು practical ಅಲ್ಲ ಅಂತೆ ನಿನಗೆ ಹೇಳುವೆ. ಈಗಿನ ಕಾಲದಲ್ಲಿ ಹಣ ದೊರಕಿಸಲಿಕ್ಕೆ ಎರಡೇ ಉಪಾಯಗಳು. ಒಂದು ದಕ್ಷಿಣೆ ಸ್ವೀಕಾರ ಮಾಡಿ ಮನೆಯ ವರನಾಗುವದು; ಇಲ್ಲವೆ, ಸನ್ಯಾಸ ಸ್ವೀಕಾರ ಮಾಡಿ ಮಠದ ಸ್ವಾಮಿಯಾಗುವದು. ಅಳಿಯನಾಗಿ ಮಾವನ ದುಡ್ಡಿನಿಂದ ಅವನ ಮಗಳನ್ನೂ ಮೊಮ್ಮಕ್ಕಳನ್ನೂ ಉಣ್ಣಿಸುವದು; ಸ್ವಾಮಿಯಾಗಿ ಸಮಾಜದ ದುಡ್ಡಿನಿಂದ ಸಮಾಜದ ಬಳಗವನ್ನು ಉಣ್ಣಿಸುವದು. ಎರಡೂ ನಿಸ್ವಾರ್ಥ ಕೆಲಸ. ಸ್ವಾಮಿಯಾಗುವದಿದ್ದರೆ ಹೇಳು. ಉಡುಪಿಗೆ ಕರೆದು ಕೊಂಡು ಹೋಗುವೆ, ಅಲ್ಲಿ ಸ್ವಾಮಿಗಳದೊಂದು ಕಾರ್ಖಾನೆಯಿದೆ. ಅದೂ ಸಾಹಸದ ಕೆಲಸ,ಸತ್ಕಾರ್ಯ. ನೋಡಿದಿಯಿಲ್ಲೊ, ಉಡುಪಿಯಲ್ಲಿ ಸ್ವಾಮಿಗಳು ಪುಕ್ಕಟೆ ಊಟ ಕೊಡುವದರಿಂದ ಅವರ competitionಕೆ ತಾಳದೆ ಈ ಉಡುಪಿಯ ಜನ ಹೊರಗೆ ಹೋಗಿ ಹೊಟೆಲ್ ತೆಗೆಯುವದು. (ಎದ್ದುನಿಂತು, ಗಂಭೀರವಾಗಿ) ಹೇಳು; ದ್ವೈತಮತದಿಂದ ಬ್ರಹ್ಮಚರ್ಯದ ತರುವಾಯ

ಗೃಹಸ್ಥಾಶ್ರಮ ಸೇರಿ ವರದಕ್ಷಿಣೆ ಪಡೆಯುವ ಕರ್ಮ ಮಾರ್ಗ ಸೇರುವೆಯೊ, ಇಲ್ಲವೆ ಅದ್ವೈತಮತದಂತೆ ಬ್ರಹ್ಮಚರ್ಯದಿಂದ ಒಮ್ಮೆಲೆ ಸನ್ಯಾಸಾಶ್ರಮಕ್ಕೆ ಪುಟಿದು ಮಠದ ಸ್ವಾಮಿಯಾಗುವ ಸಾಂಖ್ಯಮಾರ್ಗವನ್ನು ಸೇರುವೆಯೊ? ಎರಡುಗಳ ಫಲ ಒಂದೆ. यत् सांख्यैर्गम्यते स्थानं तत् योगैरपि प्राप्यते. (ಎಂದು ಭಗವಂತನ ಗಾಂಭೀರ್ಯತಾಳಿ ನಿಲ್ಲುವನು).

ಶ್ರೀಧರ:-- (ಅವನನ್ನು ದಿಟ್ಟಿಸಿ, ತಡೆಯದೆ, ಮುಗುಳುನಗೆಯಿಂದ) **ಭಲೆ**, ಕಲಿಯುಗದ ಕೃಷ್ಣಾ, ನಿನ್ನ ಮಾತು ಕೇಳಿ ನನ್ನ ಮೋಹ ತಪ್ಪಿತು, ಸ್ಮೃತಿಯು ಬಂದಿತು.

**ಕೊಂಕಣ್ಣ**:— ಆಗಲಿ ಹಾಗಾದರೆ. ಒಂದು ಕೆಲಸ ಇನ್ನು ಹೇಳುವೆ. ಅದನ್ನು ಕೇಳಿದೆಯೆಂದರೆ ಮೋಹ ಬರುವದು, ಸ್ಮೃತಿ ತಪ್ಪುವದು. **ಲಲಿತಾ ಇಲ್ಲಿಯೆ ಬಂದಾಳೆ.** (ಶ್ರೀಧರನು ಒಮ್ಮೆಲೆ ಆಂ ಎಂದು ಎದ್ದು ನಿಲ್ಲುವನು. ಅವನನ್ನು ಹಿಡಿದು) ಸ್ಮೃತಿ ತಪ್ಪುವದರೊಳಗಾಗಿ ಹೇಳುವೆ, ಈ ಉದ್ಯಾನಕ್ಕೆಯೆ ಬರುವದಿದ್ದಾಳೆ. (ಮುಂದೆ ನೋಡಿ) ಅದೊ, ಮೋಹ ಬರುವದರೊಳಗಾಗಿ ಹೇಳುವೆ, ಇಲ್ಲಿಯೆ ಬಂದುಬಿಟ್ಟಳು.

(ಶ್ರೀಧರನು ಒಮ್ಮೆಲೆ ತಿರುಗಿ ನಿಲ್ಲುವನು. ಲಲಿತೆಯು ಬರುವಳು. ಬಂದಿತು ನಮ್ಮ ಮೇಲೆ ಗಂಡಾಂತರ—ಎರಡು ಅರ್ಥದಲ್ಲಿ. ಒಂದು ಅನ್ಯೋ ಗಂಡಃ ಯಸ್ಯಾಃ ಸಾ— ಅಂದರೆ ಅವಳು ಎರಡನೆಯವರ ಹೆಂಡತಿ-ಇರಬಹುದು. ನೀತಿಶಾಸ್ತ್ರವನ್ನು ಹೇಗಾದರೂ ಬದಿಗಿಟ್ಟು ಪೂರ್ವದ ಕವಿಗಳಂತೆಯೆ ಲಲಿತೆಯ ಮುಖವು ಕಮಲದಂತೆ, ಕೈಗಳು ಲತೆಯಂತೆ ಮುಂತಾಗಿ ಬರೆಯಬೇಕೆಂದರೆ ಅಷ್ಟೊಂದು ವನಸ್ಪತಿಶಾಸ್ತ್ರದ ಪರಿಚಯವಿಲ್ಲ ನಮಗೆ. ಆದೂ ಹೋಗಲಿ, ಲಲಿತೆಯು ಸರ್ವಾಂಗಸುಂದರಿ ಎಂದು ಹೇಳಬೇಕೆ, ಸರ್ವಥಾ ಸುಳ್ಳು ಎಂದು ಕೂಗುವಿರಿ ಈ ಸರ್ವಾಂಗಸುಂದರಿಯರು

ಸಂಸಾರವನ್ನು ಬಿಟ್ಟು ಗ್ರಂಥದಲ್ಲಿಯೆ ಯಾಕೆ ಇರುವರು, ಅವರ ಮತ್ತು ಗ್ರಂಥಕಾರರ—ಇರಲಿ, ಇತ್ಯಾದಿ ಇತ್ಯಾದಿ ಅನಾಹುತ ಪ್ರಶ್ನೆಗಳನ್ನು ಕೇಳಬಹುದು. ಇದಲ್ಲದೆ ಗಂಡಸರು ಬರೆಯುವ ಹೆಂಗಸರ ವರ್ಣನೆಯಲ್ಲಿ ನೂರಕ್ಕೆ ನೂರು ಪಕ್ಷಪಾತವೇ ಒದಗುವ ಸಂಭವವಿರಬಹುದು. ಕಾರಣ, ಇದನ್ನೆಲ್ಲ ಬಿಟ್ಟುಕೊಟ್ಟು "ಅಮ್ಮಯ್ಯ, ಆ ಲಲಿತೆ ಎಷ್ಟು ಮುದ್ದಾಗಿ ಕಾಣುವಳು ನೋಡೆ!" ಎಂದು ಲಲಿತೆಯ ಸಮಾನ ವಯಸ್ಕ ಹುಡುಗೆಯರು ಒಮ್ಮೆ ಅಸೂಯೆಯಿಂದ ಆಡಿಕೊಳ್ಳುವದು ನಮಗೆ ಕೇಳ ಬಂದುದರಿಂದ ಅದನ್ನೆ ಕಾಣಿಸಿಬಿಡುವೆವು. ಒಬ್ಬ ಬ್ರಾಹ್ಮಣನು ಮತ್ತೊಬ್ಬ ಬ್ರಾಹ್ಮಣನನ್ನು ಸಾಧು, ಶೀಲವಂತ ಎನ್ನುವದು ಎಷ್ಟು ಅಸಂಭವನೀಯವೊ ಅದರ ನೂರ್ಮಡಿ ಒಬ್ಬ ಹುಡುಗೆಯು ಮತ್ತೊಬ್ಬಳನ್ನು "ಮುದ್ದು" ಎಂದು ಹೇಳುವದು ಅಸಂಭವನೀಯ; ಇದನ್ನು ಸ್ಮರಣೆಯಲ್ಲಿಟ್ಟುಕೊಂಡಿರೆಂದರೆ ಸಾಕು, ಹೆಚ್ಚಾಗಿ ಬಣ್ಣಿಸುವ ಗೊಡವೆಗೆ ನಾವು ಹೋಗುವದೇ ಇಲ್ಲ. ಇದುವರೆಗೆ ಖಿನ್ನಮನಸ್ಕನಾದ ಶ್ರೀಧರನು ಒಮ್ಮೆಲೆ ಉಲ್ಲಾಸದಿಂದ ಬಾಯ್ಬಿಟ್ಟು ಅವಳನ್ನು ನೋಡುತ್ತಿರಲು ಲಲಿತೆಯ ರೂಪು ಮೋಹಕವೆಂದು ವೇದಾಭ್ಯಾಸಜಡರಾದ ನಾವು ಬೇರೆಯಾಗಿ ಬರೆಯಬೇಕೆ? ಇದೊ, ಲಲಿತೆಯು ಮುಂದೆ ಮುಂದೆ ಬಂದಂತೆ ಪ್ರೇಕ್ಷಕರೆಲ್ಲ ನಮ್ಮ ಹಾಳು-ಹರಟೆಗೆ ಕಿವಿಗೊಡದೆ ಒಮ್ಮೆ ಲಲಿತೆಯನ್ನೂ ಒಮ್ಮೆ ಬೆಪ್ಪನಂತೆ ನಿಂತ ಶ್ರೀಧರನನ್ನೂ ನೋಡಿ ಆನಂದಪರವಶರಾಗಿದ್ದಾರೆ. ಕಾರಣ, ನಮಗೆ विभूषणं मौनं )

ಶ್ರೀಧರ:— (ಏನು ಮಾತನಾಡುವನೆಂಬುದು ತಿಳಿಯದೆ) ಓ—ಆನಂದ—ಅತಿ....ಶಯ.... pleased—I am really pleased to see you.

ಕೊಂಕಣ್ಣ:— (ನಗೆಯಿಂದ) ನಾನು introduce ಮಾಡುವೆ. ಇವರು ಶ್ರೀಧರನ ಪರಿಚಯದವರಾದ ಲಲಿತಾ; ಇವರು ಲಲಿತೆಯ ಪರಿಚಯದವರಾದ—ಸದ್ಯಕ್ಕೆ ಲಲಿತೆಯ ಪರಿಚಯವನ್ನು ಮರೆತಂತೆ ತೋರುವ—ಶ್ರೀಧರ.

ಶ್ರೀಧರ:— (ಸಂಪೂರ್ಣ ಧೈರ್ಯದಿಂದ) ಇದೇನೊ, ಪರಿಚಯ ಮರೆತಿರುವೆನೆ? ಲಲಿತಾ, ಒಮ್ಮೆಲೆ ನೀನು ಮಿಂಚಿನಂತೆ ಬಂದುದರಿಂದ ಆಶ್ಚರ್ಯಸ್ತಂಭಿತನಾದೆ ನೋಡು.

ಲಲಿತಾ:— (ನಗೆಯಿಂದ) ಮಿಂಚಿಸಂತೆ ಒಂದರೂ ಸಿಡಿಲು ಬಡೆದವ ವರಂತೆ ಮಾಡಿದಿರಲ್ಲ!

ಕೊಂಕಣ್ಣಾ:— ಮಿಂಚು ಹೊಳೆಯಿತು, ಸಿಡಿಲು ಬಡಿಯಿತು; ಸುರು ವಾಗಲಿಸ್ಸು ಮಾತಿನ ಸುರಿಮಳೆಗೆ. ಶ್ರೀಧರಾ, ಲಲಿತಾ ಯಾಕೆ ಬಂದಾಳೆ ಗೊತ್ತಿದೆಯೆ?

ಲಲಿತಾ:— (ಸಿಟ್ಟಿನಿಂದ) ಎಂದಿಗಾದರೂ ಕೊಂಕ ನೀನು; ಬಾಯಿ ಮುಚ್ಚಿಂಪರೆ ಹಲ್ಲು ಕಿರಿಯುವೆ.

ಕೊಂಕಣ್ಣಾ:— ಅಹುದು, ಹೇಳಿಕೇಳಿ ಕೊಂಕನಲ್ಲವೆ ನಾನು? ನನ್ನ ನಡತೆಯಲ್ಲಿ ಹಸನಾದುದು ಅಂದರೆ ಹಲ್ಲು ಅಷ್ಟೆ; ಅದನ್ನು ತೋರಿಸಬಾರದೆಂದರೆ—

ಲಲಿತಾ:— ಸಾಕು, ನಿನ್ನ ಸರಳತನ. (ಶ್ರೀಧರನಿಗೆ) ನಾವು ಕೊಂಕ್ಕ ನಲ್ಲಿಯೆ ಇದ್ದುಕೊಂಡೇವೆ. ಬರುವಿರಲ್ಲವೆ ಮಧ್ಯಾ ಹ್ನಕ್ಕೆ ನಮ್ಮ ಕಡೆಗೆ?

ಕೊಂಕಣ್ಣಾ:— (ಶ್ರೀಧರನಿಗೆ) "ನಾವು" ಅಂದರೆ ಬಹುಮಾನದ ಬಹು ವಚನವಲ್ಲ ಮತ್ತೆ. ಲಲಿತಾನ ಕೂಡ ಅವಳ ತಂದೆಯೂ ಬಂದಿರುವರು.

ಲಲಿತಾ:— (ಅಣಕಿಸಿ) "ತಂದೆಯೂ ಬಂದಿರುವರೆಂ"ದು ಹೆದರಿಕೆ ಹಾಕುವೆ ಏನು ಅವರಿಗೆ?

ಕೊಂಕಣ್ಣಾ:— (ಆಶ್ಚರ್ಯ ತೋರಿಸಿ) ಹೆದರಿಕೆ! ನಿಮ್ಮ ತಂದೆಗೆ ನೀನೇ ಹೆದರುವದಿಲ್ಲ, ಎರಡನೆಯವರು ಹೆದರುವರೆ? ಒಳ್ಳೇ ನ್ಯಾಯ! ಆದರೂ ಹಿರಿಯರಿಗೆ ಹೆದರುವದು ಶ್ರೀಧರನ ಚಟವಿದ್ದುದರಿಂದ ನಿಮ್ಮ ಹಿರಿಯರಿಗೂ ಹೆದರಿಯಾನು ಎಂದು ನನ್ನ ಹೆದರಿಕೆ.

ಶ್ರೀಧರ:— (ದೀನವಾಣಿಯಿಂದ ಲಲಿತೆಗೆ)ನೋಡಿದೆಯಾ ಲಲಿತಾ, ಯಾವಾಗಲೂ ನನ್ನನ್ನು ಹಂಗಿಸುವ. ನಾನಾದರೂ ಏನು ಮಾಡಲಿ?

ಕೊಂಕಣ್ಣ:— ಏನು ಮಾಡಲಿ ಎಂದರೆ ದೊಡ್ಡ ದೊಡ್ಡ ಮಾತನಾಡಬೇಡ ಆ ಸೇವಾ ಮಾಡುವೆ, ಈ ಸೇವಾ ಮಾಡುವೆ, ಸಮಾಜ ಸುಧಾರಿಸುವೆ, ಸಂಬಂಧ ಸುಧಾರಿಸುವೆ ಎಂದು ಬಡಬಡಿಸಬೇಡ. (ತಿರಸ್ಕಾರದಿಂದ) ನನಗೆ ಗೊತ್ತಿದೆ ನಿಮ್ಮಂತಹರ ಗೋತ್ರ. ದೊಡ್ಡವನಾಗುವವರೆಗೆ ಇಂತಹರ ಮಗ, ದೊಡ್ಡವನಾದ ಮೇಲೆ ಇಂತಹಳ ಗಂಡ ಎಂದು ಸ್ವತಃದ ಹೆಸರಿಲ್ಲದೆ ಹೆಸರಾಗಿ ಹೋಗುವವರು ನೀವು.

ಲಲಿತಾ:— ನೀನೇನು ಲೋಕೋದ್ಧಾರ ಮಾಡುವೆಯೊ—

ಕೊಂಕಣ್ಣ:— ನಾನೇನೂ ಮಾಡುವದಿಲ್ಲ ಹೆಚ್ಚಿಗೆ, ಆಡಿದಷ್ಟು ಮಾಡಿ ತೋರಿಸುವವ—

ಶ್ರೀಧರ:— (ಆಣಕಿನಿಂದ) ಓಹೊ, ಗೊತ್ತಿದೆ ನನಗೆ. ಇಂದಿಗೆ ಆರು ತಿಂಗಳಾಯಿತು, ನಾನು ಹೇಳಿಯೆ ಹೇಳಿದೆ, ನೋಡಿಯೆ ನೋಡಿದೆ; ಒಂದು ಕೆಲಸವಿಲ್ಲ ಇವನಿಂದ! ಲಲಿತಾ, ನಮ್ಮೂರ ಸ್ಥಿತಿ ನಿನಗೆ ಗೊತ್ತಿರಲಿಕ್ಕಿಲ್ಲ ಒಂದುವೇಳೆ. ಸಾವಿರಾರು ಜನರಿಗೆ ಹೊಟ್ಟೆಗೆ ಅನ್ನವಿಲ್ಲ, ಸಾವಿರಾರು ಮಕ್ಕಳಿಗೆ ಬೆಳೆಯುವ ವಿದ್ಯೆ ಇಲ್ಲ; ರೂಢಿ–ಆಚಾರದ ಕೆಳಗೆ ಸಿಕ್ಕು ಹಾಳಾಗಿ ಹೋಗುವರು. ಆದರೆ—

ಕೊಂಕಣ್ಣ:— (ಗಂಭೀರವಾಗಿ) ಅದಕ್ಕೆ ನೀನೇನು ಮಾಡಬೇಕೆನ್ನುವೆ?

ಶ್ರೀಧರ:— (ಗಂಭೀರವಾಗಿಯೆ) ಏನಾದರೂ ಮಾಡುವ ವಿಚಾರ ಮಾಡುವಾ ಎಂದು ಸಾವಿರ ಸಲ ಹೇಳಿದೆ ನಿನಗೆ! ಬೇರೆ

ಬೇರೆ ಸಂಘಗಳು ಬೇಕೆನ್ನುವ, ನಾನಾತರದ ಸಹಾಯ ಮಾಡುವ,ರೂಢಿಯ ರಾಕ್ಷಸನನ್ನು ಕಿತ್ತೊಗೆಯುವಾ- (ಕೊಂಕಣ್ಣನು ಒಳ್ಳೆಂದು ನಗುವನು).

ಲಲಿತಾ:— (ಸಿಟ್ಟಿನಿಂದ) ನಗುವೆಯೇನೊ? ನನಗಂತೂ ಅವರ ಮಾತಿನಿಂದ ಅಭಿಮಾನ ಪುಟಿದು, ಉತ್ಸಾಹ ತುಳುಕುವದು.

ಕೊಂಕಣ್ಣ:— (ನಗೆತಡೆದು) ಮಾತಿನಲ್ಲಿ ಅಭಿಮಾನ, ಮಾತಿನಲ್ಲಿ ಉತ್ಸಾಹ ಇದು ಹೆಂಗಸರ ರೂಢಿಯೆ ಇದೆ. ನನಗಂತೂ ಸಂಘ ಬೇಡ, ಸಹಾಯ ಬೇಡ. ನಾನೂ ಎಲ್ಲರಂತೆ ಸಾಮಾನ್ಯ ಮನುಷ್ಯನಲ್ಲವೆ? ದೊಡ್ಡ ಕೆಲಸ ಮಾಡುವ ಯೋಗ್ಯತೆ ನನ್ನಲ್ಲಿ ಒಂದ ಮೇಲೆ ಎರಡನೆಯವರಲ್ಲಿಯೂ ಆದೇ ಯೋಗ್ಯತೆ ಬರಬಹುದೆಂಬ ವಿಚಾರ.

ಲಲಿತಾ:— (ಸಿಟ್ಟಿನಿಂದ) ನಿನ್ನಂತಹಾ ಹೇಡಿ ಜನ ಇರುವದೆಂದೇ ನಮ್ಮ ಸಮಾಜ ಹಿಂದೆ ಬಿದ್ದಿದೆ.

ಕೊಂಕಣ್ಣ:— (ದುಃಖದ ಸೋಗಿನಿಂದ) ಏನು ಮಾಡುವದು? ನಮ್ಮ ಸಮಾಜದ ಸ್ಥಿತಿಯೆ ಹಾಗಿದೆ. ಹುಟ್ಟಿ ಹದಿನಾರು ವರ್ಷ ಹಿರಿಯರ ಹೆದರಿಕೆ, ಮುಂದೆ ಸಾಯುವವರೆಗೆ ಹೆಂಡತಿಯ ಸಹವಾಸ; ಹೀಗಾಗಿ ಹುಟ್ಟಿನಿಂದ ಸಾಯುವವರೆಗೆ ನಮ್ಮ ಸಮಾಜದ ಗಂಡಸರು ಹೆಂಗಸರ ಸಂಸರ್ಗದಲ್ಲಿ ಇದ್ದುದರಿಂದ ಹೆಂಗಸರ ಸ್ವಭಾವ-ಗುಣವಾದ ಹೇಡಿತನವು ಗಂಡಸಿನಲ್ಲಿ ಸೇರಿದೆ.—ಸಿಟ್ಟು ಬೇಡ, ಲಲಿತಾ. ಹೇಡಿತನವೊಂದು ಸಾಂಸರ್ಗಿಕ ರೋಗವಿದೆ. ನಮ್ಮ ಸಮಾಜದೊಳಗಿನ ರೂಢಿಯಿಂದಂತೂ epidemic (ಪಿಡುಗು) ಆಗಿಹೋಗಿದೆ.

**ಲಲಿತಾ:—** (ಅಸಹ್ಯದಿಂದ) ಆಗಿಹೋಗಿದೆಯೇನೆ? ಹೆಂಗಸರಿಗೆ ಸ್ವಾತಂತ್ರ್ಯ ಬೇಕು, ಹೆಂಗಸರು ಗಂಡಸರು ಹೆಚ್ಚಾಗಿ ಕೂಡಬೇಕು ಎಂದು resolution ಪಾಸು ಮಾಡುವ ಗಂಡಸು ನೀನಲ್ಲವೆ?

**ಕೊಂಕಣ್ಣ:—** ಹೆಂಗಸರಿಗೆ ಸ್ವಾತಂತ್ರ್ಯ ಬೇಕೆಂದು ಗಂಡಸರು ಬಡಿದಾಡಬೇಕೆ? ಇದೆಲ್ಲಿಯ ನ್ಯಾಯ! ಹೆಂಗಸರು ಗಂಡಸರು ಹೆಚ್ಚಾಗಿ ಕೂಡಬೇಕು ಎಂದರೆ—ಹಃ, ನನಗೆ ಯಾಕೆ ಇದೆಲ್ಲ? ನಮ್ಮ ಹರಟೆ ಕೇಳಿ ಸಭೆ ಎಂದು ಜನರು ನೆರೆಯಬಹುದು; ಸಭೆಗೆ ಹೋಗುವದೊಂದು ರೂಢಿಯೆ ಆಗಿದೆ.

**ಶ್ರೀಧರ:—** (ಕನಿಕರದಿಂದ) ನೋಡಿದಿಯಲ್ಲೊ, ಲಲಿತಾ!—ಆದರೂ ಇನ್ನೊಂದು ವರ್ಷದೊಳಗೆ ನಿಸ್ವಾರ್ಥಬುದ್ಧಿಯಿಂದ ಸಮಾಜಸೇವೆ ಮಾಡುವ ತರುಣರ ಸಂಘ ಕೂಡಿಸದಿದ್ದರೆ ಶ್ರೀಧರನಲ್ಲ ನಾನು.

**ಲಲಿತಾ:—** ನಿಮ್ಮ ಸಂಘದವರು ಸ್ತ್ರೀಯರ ಶಿಕ್ಷಣ, ಸ್ವಾತಂತ್ರ್ಯಕ್ಕೆ ಬಡಿದಾಡಬೇಕೆಂದು ನನ್ನ ಹಟವಿದೆ.

**ಕೊಂಕಣ್ಣ:—** ಇಬ್ಬರಿಗೂ ನನ್ನ ಆಶೀರ್ವಾದವಿದೆ; ಆದರೆ ಈಗಾಗಲೆ ಬಡಿದಾಟಕ್ಕೆ ಪ್ರಾರಂಭವಾದೀತು; ಕಾರಣ ಸಭೆ ಮುಗಿಸಿರಿ. (ಗಂಭೀರವಾಗಿ) ಸಮಾಜವನ್ನು ಸುಧಾರಿಸಬೇಕೆಂಬ ಈ ನಮ್ಮ ಗೊತ್ತುವಳಿಯು ಎಂದಿನಂತೆ ಸರ್ವಾನುಮತದಿಂದ ಸಮ್ಮತವಾಯಿತೆಂದು ಹೇಳಿ ಈ ಸಭೆಯನ್ನು ಮುಗಿಸುವೆ. (ಚಪ್ಪಾಳೆಯಿಕ್ಕಿ ನಗುವನು ಶ್ರೀಧರ-ಲಲಿತೆಯರು ಸಿಟ್ಟಿನಿಂದ ನೋಡುವರು)

(ತೆರೆ.)

**(ಮೊದಲನೆಯ ಅಂಕ ಮುಗಿದುದು)**

# ಎರಡನೆಯ ಅಂಕ

## ದೃಶ್ಯ ೧

(ಅದೇ ದಿವಸ ಮಧ್ಯಾಹ್ನದ ೪-೫ ಗಂಟೆಯ ನಡುವಿನಲ್ಲಿ ಜೋಯಿಸರು ಬೀದಿಯಲ್ಲಿ ನಡೆದಿಲ್ಲವೆ? ಆದರೆ ಇದೇನು! ಅವರ ಮುಖದಲ್ಲಿ ಬಾಡಿದ ಕಳೆ! ಕಯ್ಯಲ್ಲಿ ೩-೪ ವಾಲಿಗ್ರಂಥಗಳನ್ನು ಹಿಡಿದಿದ್ದಾರೆ. ಹೆಜ್ಜೆಯಿಂದ ಹೆಜ್ಜೆ ಎಣಿಸುತ್ತ ನಡೆಯುವಾಗ್ಗೆ ಹಿಂದಿನಿಂದ "ಶಶ್, ಶಶ್, ಜೋಯಿಸರೆ, ಜೋಇಸ್ರೆ" ಎಂದು ಕಳ್ಳದನಿಯಲ್ಲಿ ಉಸುರುತ್ತ ಕೊಂಕಣ್ಣನು ಬರುವನು. ಕನಸಿನಿಂದ ಎಚ್ಚತ್ತವರಂತೆ ಜೋಯಿಸರು ಒಮ್ಮೆಲೆ ಮುಖವನ್ನೆತ್ತಿ ತಡೆದು ಹಿಂತಿರುಗಿ ನಿಲ್ಲುವರು.)

**ಕೊಂಕಣ್ಣ**:— (ಕಳ್ಳದನಿಯಲ್ಲಿಯೆ) ಎಲ್ಲಿ ಹೊರಟಿರಿ, ಜೋಯಿಸರೆ?

**ಜೋಯಿಸ**:— (ಜೋಲುಮೋರೆಯಿಂದ) ಹೋಗುವೆಸಪ್ಪಾ, ಸಮುದ್ರ-ಮಂಥನಕೆ.

**ಕೊಂಕಣ್ಣ**:— (ಆಶ್ಚರ್ಯದಿಂದ) ಸಮುದ್ರ-ಮಂಥನಕೆ! ನಿಮ್ಮ ಮುಖ ನೋಡಿದರೆ ಆ ಮಂಥನದೊಳಗೆ ಗಿರ್ರಗಿರ್ರ ತಿರುಗಿದ ಕಡಗೋಲು ಎಂದು ಹೇಳಬಹುದು ಯಾರಾದರೂ. ಏನು ಕಡಗೋಲಿಗೆ ಕಟ್ಟಿದ ಶೇಷೊ?

**ಜೋಯಿಸ**:— (ಉಸುರ್ಗರೆದು) ಈ ಹೊತ್ತಿನ ಮಂಥನ ನಿಃಶೇಷ. ಈ ಹೊತ್ತು ನಮ್ಮ ರಜೆಯ ದಿನ.

**ಕೊಂಕಣ್ಣ**:— (ಆಶ್ಚರ್ಯತೋರಿಸಿ) ರಜೆಯ ದಿನ ಎಂದು ಕೆಲಸಕ್ಕೆ ಹೊರಟಿರೊ?

**ಜೋಯಿಸ**:— (ಬೇಜಾರವಾಗಿ) ಅಲ್ಲಾ; ರಜೆಯ ದಿನಾ ಅಂದರೆ ಪುಕ್ಕಟೆ ದುಡಿಯುವ ದಿನ.

**ಕೊಂಕಣ್ಣ**:— (ನಗೆಯಿಂದ) ನೀವು ಪುಕ್ಕಟೆ ದುಡಿಯುವದೆ? ತಿರುಪತಿ ವೆಂಕಟರಮಣ ಕೊಟ್ಟ ಸಾಲ ತಿರುಗಿ ಕೇಳಲಿಲ್ಲವೆಂದರೆ-

**ಜೋಯಿಸ**:— (ನಡುವೆ ಬಾಯಿಹಾಕಿ) ನಮ್ಮ ಸಂಕಟಕ್ಕೆ ನಿಮ್ಮ ವೆಂಕಟ-ರಮಣ.—ಯಾರೇನು ಮಾಡುವದು? ನಮ್ಮ ತಪ್ಪಿಗೆ ನಾವು ಭೋಗಿಸತೇವೆ.

**ಕೊಂಕಣ್ಣ**:— ಓಹೊ, ಈಗ್ಗ ತಿಳಿಯಿತು, ರಜೆಯ ದಿನ ಎಂಬುದರ ಅರ್ಥ ಮುಂದಿಯ ತಪ್ಪಿಗಾಗಿ ಉಪಭೋಗಿಸುವವರು ತಮ್ಮ ತಪ್ಪಿಗೆ ಭೋಗಿಸಿದರೆ ಅದು ರಜೆಯ ದಿನ, ಅಲ್ಲವೆ?

**ಜೋಯಿಸ**:— ಹಾಗಲ್ಲ. ಹತ್ತು ದಿವಸ ದಿನಾಲು ಪ್ರಶ್ನೆ ಕೇಳುವವರಿಗೆ ಹನ್ನೊಂದನೆಯ ದಿವಸ ಪುಕ್ಕಟೆ ಎಂದು ಜಾಹೀರು ಮಾಡಿದ್ದೆ. ಆದರೆ ನಮ್ಮ ರಾಯರು ಸಾಮಾನ್ಯರೆ? ಹತ್ತುದಿವಸ ಬಿಟ್ಟುಬಿಡದೆ ಕೇಳಿದರು! ಈ ಹೊತ್ತು ಹನ್ನೊಂದನೆಯ ದಿವಸ. ಮಾಡುವದೇನು? ಹೇಳಿದಂತೆ ಮಾಡಲೇಬೇಕಲ್ಲವೆ?

**ಕೊಂಕಣ್ಣ**:— ಅದಿರಲಿ ಜೋಯಿಸರೆ, ಈ ಹೊತ್ತೂ ನಿಮಗೆ ಹಣ ಸಿಕ್ಕುವಂತೆ ಮಾಡಿದರೆ—

**ಜೋಯಿಸ**:— (ಒಮ್ಮೆಲೆ ಮುಂದೆ ಬಂದು) ಮಹಾರಾಯಾ, ನಿನಗೆ ನೂರು ವರ್ಷ ಆಯುಷ್ಯ ಎಂದು ಪುಕ್ಕಟೆ ಹೇಳುವೆ.

**ಕೊಂಕಣ್ಣ**:— (ನಗೆಯಿಂದ) ಪುಕ್ಕಟೆ ಹೇಳಿದರೆ ಹೇಳಿದ್ದೇ ಪುಕ್ಕಟೆಯಾಗುವದು. (ಮೆಲ್ಲಗೆ) ನಾನು ಹೇಳುವದು ಗೋಪ್ಯ ಸಂಗತಿ; ಅದು ಹೊರಗೆ ಬಿದ್ದರೆ ನಂನಿಮ್ಮಿಬ್ಬರ ಆಯುಷ್ಯ ತುಂಬಿತು ಎಂದು ಪುಕ್ಕಟೆ ಹೇಳುವೆ ನಾನೂ.

ಜೋಯಿಸ:— ಅಯ್ಯೋ, ಆ ಹೆದರಿಕೆಯೆ? ಹೇಳಬೇಕಾದುದನ್ನೆ ಹೇಳು ವವನಲ್ಲ ನಾನು ದುಡ್ಡು ಕೊಟ್ಟರೂ.

ಕೊಂಕಣ್ಣ:— ಈಗ್ಗೆ ರಾಯರ ಮನೆಗೆಯೆ ಹೊರಟಿರಲ್ಲವೆ ಇಲ್ಲಿಂದ? (ಹತ್ತಿರ ಬಂದು) ರಾಯರಿಗೆ ಒಂದು ಭವಿಷ್ಯದ ಮಾತು ಹೇಳಬೇಕು.

ಜೋಯಿಸ:— (ಸಂಶಯದಿಂದ) ಆಗುವದೊ ಆಗಲಾರದ್ದೊ?

ಕೊಂಕಣ್ಣ:— ಆಗುವದನ್ನು ಹೇಳಬೇಕಾದರೆ ನಿಮ್ಮ ಕಡೆಗೆ ಯಾಕೆ ಬರುತ್ತಿದ್ದೆ? ಆಗಲಾರದ್ದು ಆಗಲೇಬೇಕಾಗಿದೆ. ನೀವು ಹೇಳಿಕೇಳಿ ಜೋಯಿಸರು. ಆಗಲಾರದ್ದನ್ನು ಹೇಳು ವದು ನಿಮಗೆ ಹೊಸತೂ ಅಲ್ಲ, ಕಷ್ಟವಿಲ್ಲ. (ಮೆಲ್ಲಗೆ) ಇಲ್ಲಿ ಒಬ್ಬ ಸದ್ಗೃಹಸ್ಥ ಒಂದಾನೆ; ಅವನಿಗೊಂದು ಮಗಳು. ಇದು ಇದ್ದದ್ದು, ಮತ್ತೆ ಮುಂದಿನ ಭವಿಷ್ಯ ಎಂದು ಹೇಳೀರಿ. ರಾಯರಿಗೆ ಹೇಳಬೇಕು, ಶ್ರೀಧರನ ಮದಿವೆ ಮಾಡಲೇಬೇಕು, ಇದೇ ಹುಡುಗೆಯ ಕೂಡ ಮಾಡಬೇಕು, ಆಂದರೆ ಶುಭ ಇಲ್ಲದಿದ್ದರೆ—

ಜೋಯಿಸ:— (ಹೆಮ್ಮೆಯಿಂದ) ಸಾಕ್ಸಾಕ್ಸಾಕು. ಮುಂದೆಲ್ಲ ತಿಳಿಯಿತು ನನಗೆ. ಈ ಮದಿವೆಯೆ ನಿಮ್ಮ ದೈವಬಲ, ಇಲ್ಲದಿದ್ದರೆ ನಿಮ್ಮ ಹಂಬಲ ಇತ್ಯಾದಿ ಇತ್ಯಾದಿ ಹೇಳಿ, ಅಂತೂ ತಾತ್ಪರ್ಯ ವೇನು, ಈ ಮದಿವೆ ಆಗಲೇಬೇಕು, ಇಷ್ಟೆ ಅಹುದಲ್ಲೊ?

ಕೊಂಕಣ್ಣ:— (ನಮ್ರತನದ ಸೋಗಿನಿಂದ) ಬಲ್ಲವರಿಗೆ ಹೆಚ್ಚಿಗೆ ಒರೆಯಲು ನಾನು ಸಮರ್ಥನಲ್ಲ. ಆದರೂ ಜೋಯಿಸರೆ, ಇದನ್ನು ಹೇಳಿದವ ನಾನು ಎಂದು—

**ಜೋಯಿಸ:—** (ಮೇಲಿನಂತೆಯೆ) ಅಯ್ಯೋ, ನೀನೇನು ಹೇಳುವೆ ಇಂತಹಾ ದ್ದನ್ನು! ಜ್ಯೋತಿಷಿಯೆ ಹೇಳಬೇಕು, ರಾಯರಂತಹರು ಕೇಳಬೇಕು, ಅಂದರೆ ನಾಲ್ಕು-ಜನರ ವಿಶ್ವಾಸ. (ಸುಳ್ಳು ನಗೆಯಿಂದ)..ಒಬ್ಬರೊಬ್ಬರ ಮೇಲೆ ವಿಶ್ವಾಸವಿಡದಿದ್ದರೆ ನಡೆಯುವದು ಹೇಗೆ?

**ಕೊಂಕಣ್ಣ:—** (ಉಸುರ್ಗರೆದು) ವಿಶ್ವಾಸ ಇಡುವದು, ನಿಶ್ವಾಸ ಬಿಡುವದು; ಸಮನಿಮಗಲ್ಲ, ಮುಂದಿಯ ಮಾತು ಹೇಳಿದೆ. ನೀವು ನನ್ನ ಮೇಲೆ ವಿಶ್ವಾಸವಿಡಿ, ಚಕ್ರಬಡ್ಡಿಯಿಂದ ತಿರುಗಿ ಕೊಡುವೆ.

**ಜೋಯಿಸ:—** (ಸಂಶಯದಿಂದ) ಚಕ್ರಬಡ್ಡಿ ಅಂದರೆ? ಬಡ್ಡಿಗೆ ಚಕ್ರವ್ರೊ— ಏನು ಚಕ್ರದ ಹಾಗೆ ತಿರುಗಿ ಮತ್ತೆ ಬೊಡ್ಡೆಗೆ ಬಂದು ನಿಲ್ಲುವದೊ?

**ಕೊಂಕಣ್ಣ:—** ಓಹೊ, ನಿಲ್ಲುವದೆಂದರೆ ಸ್ಮರಣೆಗೆ ಬಂದಿತು—ಎಷ್ಟೋತ್ತು ನಿಲ್ಲುವದು ಇಲ್ಲಿಯೆ.

**ಜೋಯಿಸ:—** ಹಾ, ಕೊಂಚ ತಡೆ. ಕೊಂಕಣ್ಣಾ, ನೀವೆಲ್ಲ ನಾಲ್ಕು-ಜನ ಕೂಡಿ ಇಂಗ್ಲಿಶ ಕಲಿಯಲಿಲ್ಲ ಎಂದು ನಮ್ಮನ್ನು ನಗುವಿರಿ. (ಅಭಿಮಾನದಿಂದ) ನಾನೊಂದು ಹೊಸತಾಗಿ ಬರೆದಿರುವೆ ಧರ್ಮಗ್ರಂಥ. ಅದನ್ನೊಮ್ಮೆ ನೋಡು—

**ಕೊಂಕಣ್ಣ:—** ಅಚ್ಚು ಹಾಕಿಸಿದರೆ ಕಳಿಸಿಕೊಡಿ ಒಂದು ಕಾಣಿಕೆಯ ಪ್ರತಿ.

**ಜೋಯಿಸ:—** (ಅಧೈರ್ಯದಿಂದ) ಏನೊ, ಧರ್ಮಗ್ರಂಥ ಅಚ್ಚು ಹಾಕುವದು, ಮನೆಯ ಹೆಂಗಸು ಮೊಚ್ಚೆ ಹಾಕುವದು, ಯಾಕೊ

ಇನ್ನೂ ಸರಿಬರುವದಿಲ್ಲ ನಮಗೆ. ಮೊದಲು ನಿನಗೆ ಅದರ ರೂಪರೇಷಾ ಕೊಡುವೆ, ನೋಡು, ಆ ಮೇಲೆ—

**ಕೊಂಕಣ್ಣ**:— (ಆಶ್ಚರ್ಯತೋರಿಸಿ) ರೂಪರೇಷಾ! ರೂಪರೇಷಾ ಎನ್ನು ವವಳು ಔರಂಗಜೇಬನ ಮಗಳಲ್ಲವೆ?

**ಜೋಯಿಸ**:— (ನೊಂದುಕೊಂಡು) ಇರಲೆಪ್ಪಾ, ಕೇಳಬಾರದೆ ಒಂದು ನಿಮಿಷ? (ಕೊಂಕಣ್ಣನು ತಲೆತೂಗುವನು. ಜೋಯಿಸರು ಹೆದರಿ, ಕೆಮ್ಮಿ, ಭವಿಷ್ಯದ ಎಂದರೆ ಇನ್ನು ಮುಂದೆ ಸುರಿಯಬೇಕಾದ ಬೆಮರು ಒರೆಯಿಸಿಕೊಳ್ಳುತ್ತ) ನಾನು ಸುರುವು ಮಾಡಿದ್ದು ಹೀಗೆ. ಧರ್ಮ, ಧರ್ಮ, ಅಂದರೇನು?— ಮೂರು ತರದ ಧರ್ಮ. ಮೊದಲನೆಯದು ಯಮಧರ್ಮ; ಎರಡನೆ ಯದು ಕುಂತಿಯ ಮಗ ಧರ್ಮ.

**ಕೊಂಕಣ್ಣ**:— (ತಲೆತೂಗುತ್ತ) ಹುಂ.

**ಜೋಯಿಸ**:— (ಲಕ್ಷ್ಯವಿಲ್ಲದ್ದರಿಂದ ಧೈರ್ಯತಾಳಿ) ಹೀಗೆ ಈ ಎರಡು ಧರ್ಮ ಗಳಿಂದ ಸಿದ್ಧವಾಗುವದೇನು? ಯುಗಯುಗಕ್ಕೆ ಬದ ಲಾಗುವದು ಧರ್ಮ, ಅಲ್ಲವೆ? ಅಂದಮೇಲೆ, ಯುಗ ಯುಗಕ್ಕೆ ಬದಲಾಗುವದೇ ಧರ್ಮ ಎಂದು ನನ್ನ ವ್ಯಾಖ್ಯೆ. ಈಗ್ಗೆ ನಮ್ಮಲ್ಲಿ ಧರ್ಮ ಬದಲಾಗಿದೆ, ಅಂದ ಮೇಲೆ ನಮ್ಮ ಯುಗವು ಕೂಡ ಬದಲಾಗಲೇಬೇಕು, ಅಲ್ಲವೆ? ಹೀಗೆ ಯುಗ ಬದಲಾದ ಮೇಲೆ, ಅದರ ಕೂಡ ಧರ್ಮವೂ ಬದಲಾಗಬೇಕು. ಆ ಬದಲಾದದ್ದೆ ನಮ್ಮ ಧರ್ಮ ಎಂದು ನನ್ನ ಸಿದ್ಧಾಂತ.

**ಕೊಂಕಣ್ಣ**:— ಇನ್ನು ಈ ನಿಮ್ಮ ಸಿದ್ಧಾಂತ ಬದಲಾಗುವದರೊಳಗಾಗಿ ಹೇಳಿಬಿಡಿ ನಿಮ್ಮ ಧರ್ಮ.

**ಜೋಯಿಸ:—** (ಲಕ್ಷ್ಯವಿಲ್ಲದೆಯೆ) ಇದು ನಮ್ಮ ಧರ್ಮಾ ಅಂದಮೇಲೆ, ನಮ್ಮ ಜಾತಿಯೂ ಬೇರೆ ಬೇಕಲ್ಲವೆ? ಗುಣದಿಂದ ಜಾತಿ. ಸ್ವರ್ಗಕ್ಕೆ ಕಳಿಸುವವರು ಬ್ರಾಹ್ಮಣರು, ಸಂರಕ್ಷಣ ಮಾಡುವವರು ಕ್ಷತ್ರಿಯರು, ವ್ಯವಸಾಯದವರು ವೈಶ್ಯರು, ದುಡಿಯುವವರು ಶೂದ್ರ. ಸರಿ. ನಮ್ಮ ಯುಗದಲ್ಲಿ ಸ್ವರ್ಗಕ್ಕೆ ಕಳಿಸುವಂತಹ ಬ್ರಾಹ್ಮಣರು ಯಾರು? ವಕೀಲರು, ವೈದ್ಯರು. ಸಂರಕ್ಷಣ ಮಾಡುವ ಕ್ಷತ್ರಿಯರು ಯಾರು? ನಿಮ್ಮ ಆ ಇನ್ಶೂರನ್ಸ ಕಂಪನಿಯವರು. ವ್ಯವಸಾಯದ ವೈಶ್ಯರು ಯಾರು? ಸಂಘದ ಹೆಸರಿನಿಂದ ದುಡ್ಡು ಗಳಿಸುವವರು. ಆದರಂತೆ, ದುಡಿಯುವ ಶೂದ್ರರೆಂದರೆ, ಬುದ್ಧಿಯಿದ್ದ ಏಟುಗಳು.

**ಕೊಂಕಣ್ಣ:—** (ಬೆರಗಾದವನಂತೆ) ಜೋಯಿಸರೆ—

**ಜೋಯಿಸ:—** (ನಗೆಯಿಂದ) ಇದಲ್ಲದೆ, ಇಂಗ್ಲಿಶ್ ಕಲಿತವರಿಗೆ ಸುಲಭ ಆಗಬೇಕೆಂದು ಸೂತ್ರವನ್ನೊಂದು ಮಾಡಿರುವೆ. (ಗಂಭೀರವಾಗಿ) ಲಾಯರ್—ಟಾಯರ್—ರಾಯರ್—ವಾಯರ್—ತು.

**ಕೊಂಕಣ್ಣ:—** (ಗಾಬರಿಯಿಂದ) ಇದೇನು ಪಾಠಮಾಡುವ ಸೂತ್ರವೊ, ಕಂಠ ಸುತ್ತುವ ಹಗ್ಗವೊ?

**ಜೋಯಿಸ:—** (ಹೆಮ್ಮೆಯ ನಗೆಯಿಂದ) ಭಾಷ್ಯ ಹೇಳುವೆ ಕೇಳು.
ಲಾಯರ್ (lawyer), ವಕೀಲ, ಸ್ವರ್ಗಕ್ಕೆ ಕಳಿಸುವ ಬ್ರಾಹ್ಮಣ.
ಟಾಯರ್ (tyre), ರಬ್ಬರ್, ದಿಗ್ವಿಜಯ ಮಾಡುವ ಕ್ಷತ್ರಿಯ.

ರಾಯರ್, ರಾಯರು, ಇಲ್ಲದ ವ್ಯವಸಾಯದ ವೈಶ್ಯ. ವಾಯರ್, wire, ವಿದ್ಯುತ್, ದುಡಿಯುವ ಶೂದ್ರ. ಆ ಕಡೆಯ "ತು" ಅಂದರೆ "ಮುಗಿಯಿತು" ಇದರ ಸಂಕ್ಷಿಪ್ತರೂಪ.

**ಕೊಂಕಣ್ಣ**:— (ಉಸುರ್ಗರೆದು) ಒಟ್ಟುಗೂಡಿಸಿ ವಿಕ್ಷಿಪ್ತರೂಪ. ಈ ನಿಮ್ಮ ಗ್ರಂಥಕ್ಕೆ ತಪ್ಪಿದ ಸ್ಮೃತಿ ಎಂದು ಹೆಸರು ಇಟ್ಟು ಬಿಡಿ.

**ಜೋಯಿಸ**:— (ಸಂಶಯದಿಂದ) ಯಾಕೆ?

**ಕೊಂಕಣ್ಣ**:— ಓದಿದವರ ಸ್ಮೃತಿ ತಪ್ಪಿದರೆ ನಾವು ಜವಾಬ್ದಾರರಲ್ಲ ಎಂದು ಹೇಳಿದ ಹಾಗಾಯ್ತು.

**ಜೋಯಿಸ**:— (ದೈನ್ಯದಿಂದ) ಯಾಕೆ, ಸರಿಹೋಗಬಹುದೆ?

**ಕೊಂಕಣ್ಣ**:— ಹೋಗಬೇಕೇನೊ ಸರಿ. (ವಿಚಾರ ಮಾಡಿದವನಂತೆ) ಆದರೆ, ಜೋಯಿಸರೆ, ನಿಮ್ಮ ಧರ್ಮ ದ್ವೈತವೊ ಅದ್ವೈತವೊ ಹೇಳಲಿಲ್ಲವಲ್ಲ.

**ಜೋಯಿಸ**:— (ನಾಚಿಕೆಯಿಂದ) ಇದಿನ್ನೂ ಸಾರಾಂಶ ಹೇಳಿದೆ.

**ಕೊಂಕಣ್ಣ**:— (ವಿಚಾರಮಾಡುತ್ತಲೆ) ನನಗೆ ತೋರತದೆ, ದ್ವೈತ ನಮ್ಮಲ್ಲಿದೆ, ಅದ್ವೈತ ನಮ್ಮಲ್ಲಿದೆ. ಶ್ರೀಮಂತರು ಸಾಮಾನ್ಯವಾಗಿ ದ್ವೈತರು, ಅವರಿಗೆ ಎರಡು ಹೆಂಡಂದಿರು, ಎರಡು ನಾಲಗೆ; ಇತ್ಯಾದಿ ಇತ್ಯಾದಿ. ಬಡವರೆಲ್ಲ ಅದ್ವೈತಿ, ಅವರಿಗೆ ಜೀವ ಎಂಬುದು ಮಾಯಾ, ಮರಣ ಎಂಬುದು ಸತ್ಯ.—ಜೋಯಿಸರೆ, ಇದಿಷ್ಟು ನಿಮ್ಮ ಸ್ಮೃತಿಯೊಳಗಿರಲಿ. ಅದೇನೆ ಇರಲಿ. ಮೊದಲು ನಾನು ಹೇಳಿದ್ದು

ಸ್ಮೃತಿಯೊಳಗಿರಲಿ. (ಹೊರಡುತ್ತ) ಹೇಳಿದವ ನಾನು ಎಂಬುದು ಮಾತ್ರ ಸ್ಮೃತಿ ತಪ್ಪಲಿ.

ಜೋಯಿಸ:— (ಅಧೈರ್ಯದಿಂದ) ಆದರೆ ನಾನು ಮಾಡಿದ ಮೇಲೆ ನನಗೆ ಹೇಳಿದುದರ ಸ್ಮೃತಿ ತಪ್ಪೀತು ಮತ್ತೆ?

ಕೊಂಕಣ್ಣ:— (ನಗುತ್ತ) ತಪ್ಪಿದ ಸ್ಮೃತಿ ನನ್ನದಲ್ಲ. ಸರ್ವಾಧಿಕಾರಗಳು ಕಾದಿಡಲ್ಪಟ್ಟಿವೆ ಎಂದು ಅಚ್ಚುಹಾಕಿಸಿ ಬಿಡಿ. All rights reserved. (ಹೋಗುವನು.)

ಜೋಯಿಸ:— (ಆನಂದದ ಆವೇಶದಲ್ಲಿ) ಆಲ್ ರಾಯಿಟ್ ಅಂದನಲ್ಲವೆ? ಇನ್ನೇನು ಹೆದರಿಕೆ? ಅಕಲ್ಪಿತ ಧನಸಂಪಾದನೆ. (ಹೋಗುತ್ತ, ಉಸುರ್ಗರೆದು) ಆಗಲಿ, ಭವಿಷ್ಯ ಬಲ್ಲವರು ಯಾರು?

(ಹೋಗುವನು)



## ದೃಶ್ಯ ೨

(ಕೊಂಕಣ್ಣನ ಮನೆಯಲ್ಲಿಯ ಒಂದು ಕೋಣೆ. ಯಾವ ಕೋಣೆಯಾದರೇನು ? ಪ್ರೇಕ್ಷಕರೆ, ಕೊಂಕಣ್ಣನು ಬಡವನೆಂಬ ಸಂಗತಿಯನ್ನು ನಾವು ಒಡೆದು ಹೇಳದಿದ್ದರೂ ಅವನ ಮಾತಿನಿಂದ ನೀವಾಗಿಯೆ ಕಂಡುಹಿಡಿದಿರಬಹುದು. ಕೊಂಕಣ್ಣನು ತೀರ ಬಡವ; ಅಂದಮೇಲೆ ಅವನ ಮನೆಯನ್ನು ವರ್ಣಿಸುವದು ಕಷ್ಟಸಾಧ್ಯವಲ್ಲವೆ? ಮೊದಲನೆಯ ಮಾತು: ವರ್ಣಿಸುವಂತಹದೇನೂ ಇಲ್ಲ ಅವನ ಮನೆಯಲ್ಲಿ. ಎರಡನೆಯದೆಂದರೆ ಬಡವನ ಮನೆ ಎಂದರೆ ಹೀಗೆ ಎಂದು ನಮ್ಮ ಪ್ರಾಚೀನಕವಿಗಳಾದರೂ ವರ್ಣಿಸಿಲ್ಲ; ಇಲ್ಲವಾದರೆ ವಾಡಿಕೆಯಂತೆ ಅವರ ಕಲ್ಪನೆಗಳನ್ನು ಕದಿಯಬಹುದಾಗಿತ್ತು. ಮೂರನೆಯ ಮಾತು: ನಿಮಗೆ ತಿಳಿಯುವಂತೆ ವರ್ಣಿಸಬೇಕಲ್ಲವೆ? ಇಲ್ಲವಾದರೆ ನೀವು ಕೋಪಿಸುವಿರಿ. ಹಾಗೆ ವರ್ಣಿಸಿದೆವಾದರೆ ಸಮಾಜಕ್ಕೆ ಸಮಾಜವೇ ನಮ್ಮ ಮೇಲೆ ಕೋಪಿಸಬಹುದು. ಬಡವನ ಮನೆ ಎಂದರೆ ಹೀಗೆ ಎಂದು ಹೇಳಲು ಒಟ್ಟಾರೆ ನಮಗೆ ಧೈರ್ಯವಿಲ್ಲ. ಮುಂಜಾವಿನಿಂದ ಸಂಜೆಯವರೆಗೆ, ಹುಟ್ಟಿನಿಂದ ಸಾಯುವವರೆಗೆ, ಪ್ರತಿಯೊಂದು ಉಸಿರಿಗೆ ಪರಾವಲಂಬಿಯಾಗುವ ಜನರಿದ್ದುದರಿಂದ ಬಡವರ ಮನೆಯು ಅವ್ಯಕ್ತಭಾರತಮಾತೆಯು ವ್ಯಕ್ತಸ್ವರೂಪವೆಂದು ಹೇಳಬೇಕೆ? ಇಲ್ಲವೆ ಕೇವಲ ಮಾತಿನಲ್ಲಿ ಉತ್ಸಾಹ, ಮಾತಿನಿಂದ ಸುಖಪಡೆಯುವ ಜನರಿದ್ದುದರಿಂದ ಬಡವರ ಮನೆಯು ಭಾರತೀಯರದೊಂದು (pocket edition) ಸಣ್ಣ ಪ್ರತಿಯೆಂದು ಹೇಳಬೇಕೆ? ಇಲ್ಲವೆ ಯಾವಾಗಲೂ ಒಬ್ಬರೊಬ್ಬರಲ್ಲಿ ಕೋಪಿಸಿಕೊಂಡು ಕಡಿದಾಡಿ ಕೆಲಸ ಮಾಡದ ಜನರಿದ್ದುದರಿಂದ ಬಡವರ ಮನೆಯು council ಕೌನ್ಸಿಲ್ ಇಲ್ಲವೆ local board ಲೋಕಲ್‌ಬೋರ್ಡ ಸಭೆಯೆಂದು ಹೇಳಬೇಕೆ? ಇಲ್ಲವೆ ಎಲ್ಲಿ ನೋಡಿದಲ್ಲಿ ಅವ್ಯವಸ್ಥೆ, ಕಸ-ಕಡ್ಡಿ ಇದ್ದುದರಿಂದ ಬಡವರ ಮನೆಯು municipality ಮ್ಯುನಿಸಿಪಾಲಿಟಿ ಇದ್ದ ಊರು ಎಂದು ಹೇಳಬೇಕೆ? ಇಲ್ಲವೆ ಶರೀರದ ಸ್ವಾಸ್ಥ್ಯ, ಅನುಕೂಲತೆಗಳ ಪರಿವೆ ಇಲ್ಲದೆ ಬಿದ್ದುಕೊಂಡಿರುವ ಬಂಧು-ಬಳಗದ ಗಲಾಟೆಯಿಂದ ಬಡವರ ಮನೆ ಎಂದರೆ ರೇಲ್ವೆಯ ಥರ್ಡಕ್ಲಾಸ್ ಕಂಪಾರ್ಟಮೆಂಟು ಎಂದು ಹೇಳಬೇಕೆ? ಯಾವದನ್ನು ಹೇಳಿದರೂ ಮುಂದಾಳುಗಳೆನ್ನುವವರು ಪೂರ್ವಜನ್ಮದ ಕರ್ಮದಂತೆ ನಮ್ಮ ಹಿಂದೆ ಬೆನ್ನುಹತ್ತುವರು. ಬೇಡ. ಬೀಳಾದ ನಾಲ್ಕು ಗೋಡೆಗಳೊಳಗೆ ಕತ್ತಲೆ ತುಂಬಿಕೊಂಡಿದುದರಿಂದ ಬಡವರ ಮನೆಯು ನಾಲ್ಕು ವರ್ಣಗಳಿಂದ ಸುತ್ತುಗಟ್ಟಿ ಕುರುಡಾದ ಹಿಂದು ಸಮಾಜ

ವೆಂದೂ, ಆಧಿ-ವ್ಯಾಧಿ ಹಸಿವೆ-ನೀರಡಿಕೆಗಳಿಂದ ಕಂಗಾಲಾದ ಜನರಿಗೆ ಆಶ್ರಯ ಕೊಡುವದರಿಂದ ಬಡವರ ಮನೆಯು ಕ್ಷೇತ್ರಸ್ಥಲದಂತೆ ಎಂದೂ, ಇದರಲ್ಲಿ ಹುಟ್ಟಿ ಬೆಳೆಯುವವರ ದಟ್ಟಿಯಲ್ಲಿ ಸಿಟ್ಟು ಸಾಹಸಗಳಿಲ್ಲದುದರಿಂದ ಈ ಬಡವರ ಮನೆಯು ಬಾಲವಿವಾಹದಂತೆ ಎಂದೂ ಹೇಳಬೇಕೆಂದರೆ ಎಲ್ಲಿ ನಮಗೆ ಧರ್ಮಲಂಡ, ಸಮಾಜದ ಬಂಡ, ವಿಚಾರ ಪುಂಡ ಎನ್ನುವರೆಂಬ ಹೆದರಿಕೆ. ಇವೆರಡೂ ಸರಣಿಯನ್ನು ಬಿಟ್ಟು ಹಿಂದೆ ಎಂದಾದರೂ ಅಂದವಾಗಿರಬಹುದಲ್ಲವೆ ಎಂಬ ಆಶೆಯ ಅಭಿಮಾನಕ್ಕೆ ಆಶ್ರಯ ಕೊಡುವದರಿಂದ ಬಡವರ ಮನೆಯು ಕರ್ನಾಟಕದಂತೆ; ಬಾಗಿಲು ತೆರೆದ ವೇಳೆಗಷ್ಟೆ ಹೊರಗಿನ ಬೆಳಕು ಮಿಕ್ಕ ವೇಳೆಗೆ ಕತ್ತಲೆ ಮುಸುಕುವದರಿಂದ ಬಡವರ ಮನೆಯು ಗ್ರಂಥದಿಂದ ಕಲಿತ ಈಗಿನ ವಿದ್ಯೆಯಂತೆ; ಇದರ ಒಳಗಿದ್ದುಕೊಳ್ಳುವವರಿಗೆ ಹೊರ ಗಿನ ಜಗತ್ತಿನ ಕಲ್ಪನೆಯೆ ಆಗುವದಿಲ್ಲವಾದುದರಿಂದ ಬಡವರ ಮನೆಯು ಈಗಿನ ಕನ್ನಡಸಾಹಿತ್ಯದಂತೆ; ಹೀಗೆ ಹೇಳಿದರೆ "ನೀವು ಎಂದಾದರೂ ತೃತೀಯಃ ಪಂಥದ ವರೆ" ಎಂದು ಹಿರಿಯರು, ಅರಸಿಕರೆಂದು ಕವಿಗಳು, ಹತಾಶರೆಂದು ತರುಣರು ನಮ್ಮ ಮೇಲೆ ಸಿಟ್ಟಾಗಬಹುದು. ಕಾರಣ, ಎಲ್ಲವನ್ನೂ ಬಿಟ್ಟುಕೊಟ್ಟು ಬಡವರ ಮನೆ ಎಂದರೆ ನಮ್ಮಂತೆ, ನಮ್ಮ ನಾಟಕದಂತೆ, ಸತ್ಯದಂತೆ-ಹೊರಸುಖಕ್ಕೆ ಮೈಮರೆತ ಇಂದ್ರಿಯಗಳಿಗೆ ಬೇಡಾದರೆ-ಪರಿಪಕ್ವವಾದ ಬುದ್ಧಿಗೆ ಬೇಕೆನ್ನಿಸುವಂತಹದು, ಎಂದು ಹೇಳಿಬಿಡುವೆವು. ಪ್ರೇಕ್ಷಕರೆ, ನಗಬೇಡಿರಿ. ಲಲಿತೆಯು ಕುಳಿತದ್ದೇನೊ ಈಗ್ಗೆ ನಮ್ಮ ದೃಷ್ಟಿಗೆ ಬಿದ್ದಿತು. ಆದರೆ ಅವಳನ್ನು ನೋಡಿಯೆ ಬಡವರ ಮನೆಯು "ನಮ್ಮಂತೆ" ಮುಂತಾಗಿ ನಾವು ಹೇಳಿಕೊಂಡಿಲ್ಲ. ಪಾಪ! ಲಲಿತೆಯು ಕುಳಿ ತದ್ದು ಒಂದು ಕಟ್ಟಿಗೆಯ ಪೆಟ್ಟಿಗೆಯ ಮೇಲೆ. ಬಡವರೆಂದರೆ ದೇವರ ಸೈನಿಕರೆಂದೂ, ದೇವರು ಯಾವಾಗ ಆಜ್ಞೆಕೊಟ್ಟನು ನಿಶ್ಚಿತವಲ್ಲವೆಂದೂ, ತಾನು ಮಾತ್ರ ಯಾವಾ ಗಲೂ ಸಿದ್ಧನಿರಬೇಕೆಲೆ ಎಂದೂ ತಿಳಿದುಕೊಂಡಿರುವನೇನೊ ಎನ್ನುವಂತೆ ಕೊಂಕಣ್ಣನು ತನ್ನ ಯಾವತ್ತನ್ನೂ ಇದೊಂದು ಪೆಟ್ಟಿಗೆಯಲ್ಲಿ ಭದ್ರವಾಗಿ ಬೀಗ ಹಾಕಿ ಇಟ್ಟಿರುವ. ಹೊರಗುಳಿದ ವಸ್ತುವೆಂದರೆ ಅಲ್ಲಿ ಎರಡು-ಪದರಾಗಿ ಹಾಸಿದ ಕಂಬಳಿ. ಎರಡು-ಪದರು ಯಾಕೆಂದೊ? ತನ್ನ ಛಿದ್ರಗಳನ್ನು ಮುಚ್ಚಿಕೊಳ್ಳುವ ಸುಳ್ಳುಗಾರನ ಎರಡು ನಾಲಗೆಗಳಂತೆ ಆ ಕಂಬಳಿಯ ಎರಡು-ಪದರುಗಳು. ಇರಲಿ. ಆ ಕಂಬಳಿಯಂ ತೆಯೆ ವಯಸ್ಸಿನಿಂದ ಬಾಗಿದ ಮುದುಕನೊಬ್ಬನು ಅದರ ಮೇಲೆ ಕುಳಿತಿರುವ. ಅವನು ಲಲಿತೆಯ ತಂದೆಯೆಂಬುದು ಅವಳ ಮಾತಿನಿಂದಲೆ ಕಂಡುಬರುವದು.)

ಲಲಿತಾ:— (ಕನಿಕರದಿಂದ) ಅಪ್ಪಾ, ನೀವೆಷ್ಟು ಹೇಳಿದರೂ ನನಗೆ ಸರಿ ಸಾಲದು. ನಾನೆಲ್ಲಿ ಬರುತ್ತಿದ್ದೆನಪ್ಪಾ ಇಲ್ಲಿಗೆ, ಮೊದಲೇ ನನಗೆ ಗೊತ್ತಿದ್ದರೆ!

ತಂದೆ:— (ಪ್ರೇಮದ ಎಳೆನಗೆಯಿಂದ) ಹುಚ್ಚೀ, ನಿನಗೆ ಮೋಸ ಮಾಡ ಬೇಕೆಂದು ಇಲ್ಲಿಗೆ ಕರೆತಂದೆನೆ? ನೀನೇ ಹೇಳು, ಎಲ್ಲರ ಮಾತು ಮೀರಿ ಇಲ್ಲಿಯ ವರೆಗೆ ವಿದ್ಯಾ ಕೊಡಿಸಿದೆ ನಿನಗೆ.

ಲಲಿತಾ:— (ನಡುವೆ ಬಾಯಿಹಾಕಿ, ಅಣಕಿಸಿಂದ) ಕೊಡಿಸಿದಿರಲ್ಲ ಕತೆಯೊಳಗಿನ ಬೆಕ್ಕು ಹುಲಿಗೆ ವಿದ್ಯಾ ಕೊಟ್ಟ ಹಾಗೆ. ಇಲ್ಲಿಗೆ ನನ್ನನ್ನು ಕರೆದುಕೊಂಡು ಬರುವ ವಿದ್ಯೆ ಮಾತ್ರ—

ತಂದೆ:— (ತಡೆಯದೆ) ಹಾಳಾಗಲಿ ಅದೆಲ್ಲ. ಮನಸಿಗೆ ಬಂದ ಹಾಗೆ ಮಾತನಾಡುವ ನಿನಗೆ ವಿದ್ಯೆ ಕಲಿಸಿ ನನಗೆಯೆ ವಿದ್ಯಾ ಬುದ್ಧಿ ಇದ್ದಿಲ್ಲ ಅನ್ನುವ ಪ್ರಸಂಗ ಬಂದಿದೆ. (ಸಮಾಧಾನ ದಿಂದ) ನನ್ನ ಮಾತು ಕೇಳಿಕೊ, ಲಲಿತಾ; ನಿನ್ನ ಮಾತು ಕೇಳಿ ಕಲಿಯುವದಾಯಿತು, ಕಲಿತ ಮೇಲೆ ನನ್ನ ಮಾತು ಕೇಳಿಕೊಬಾರದೆ?

ಲಲಿತಾ:— (ಅಬ್ಬಟೆಯಿಂದ) ನೀವು ಮದಿವೆಯ ಮಾತನ್ನೆ ಆಡುತ್ತಿದ್ದರೆ ಬೇಡ ನನಗೆ.

ತಂದೆ:— (ನಗೆಯಿಂದ) ಆಗಲಿ, ಮದಿವೆಯ ಮಾತು ಬೇಡ. ಅದೇನೊ ನೀನು geometry ಅಂತೆ ಹೇಳುತ್ತಿದ್ದೆಯಲ್ಲ, ಇದ್ದುದು ಇಲ್ಲ ಎಂದು ತಿಳಿದು ಸಿದ್ಧಮಾಡಿ ತೋರಿಸುವ ಪದ್ಧತಿ?

ಲಲಿತಾ:— (ಸಿಟ್ಟಿನಿಂದಲೆ) Reductio ad absurdum.

ತಂದೆ:— ಆಹಾ! ಅದೇ; ಸದ್ಯಕ್ಕೆ ನಾನೂ ನೀನೂ ಆ ಸ್ಥಿತಿಯಲ್ಲಿ

ಇದ್ದೇವೆ ಎಂದು ತಿಳಿ, ನಿನ್ನ ಮದಿವೆ ಬೇಡ ಎಂದು ತಿಳಿ, ಮುಂದೆ ಮಾಡುವದೇನು ?

ಲಲಿತಾ:— (ಹೆಮ್ಮೆಯಿಂದ) ಮಾಡುವದೇನು ? ಬೇಕಾದ್ದು ಮಾಡುವೆ, ಕೆಲಸ ಮಾಡುವೆ—

ತಂದೆ:— ಆಹಾ! ಇಲ್ಲಿ ಬಂದಿತು ನೋಡು ನೀ ಹೇಳಿದ ಸ್ಥಿತಿ. ಕೆಲಸ ಮಾಡುವದು ಹೇಗೆ? ನಿಮ್ಮಕಿಂತ ಮೊದಲು ಕಲಿತು, ನಿಮ್ಮಕಿಂತ ಮೊದಲೇ ಕೆಲಸ ಇಲ್ಲ ಎಂದು ಕೂಗಲಿಕ್ಕೆ ತಲೆಬಾಗಿಲದೊಳಗೆ ನಿಂತಾರೆ ಎಷ್ಟೋ ಗಂಡ-ಹುಡುಗರು.— ಆದರೆ ಹೆಣ್ಣು-ಮಕ್ಕಳ ಸ್ಥಿತಿ ಎಷ್ಟೋ ಬೇಕು ಎಂದು ನನ್ನ ಅಭಿಪ್ರಾಯ. ಕಲಿತ ಗಂಡ-ಹುಡುಗನಿಗೆ ಸರಿಯಾದ ಕೆಲಸ ಸಿಕ್ಕದಿದ್ದರೂ, ಕಲಿತ ಹೆಣ್ಣು-ಹುಡುಗಿಗೆ ಸರಿಯಾದ ವರ ಬೇಕಾದಾಗ್ಗೆ ಸಿಕ್ಕುವ.—ಅದಕ್ಕೆ, ನನ್ನ ಮಾತು ಕೇಳಿಕೊ.

ಲಲಿತಾ:— (ಹಟದಿಂದ) ನನಗೇನು ಬೇಡ. (ಕಣ್ಣೀರುತಂದು) ಇಷ್ಟು ಕಲಿತರೂ ಮತ್ತೆ ಮದಿವೆ ಮಾಡಿಕೊಂಡು ಮನೆಯನ್ನೆ ಹಿಡಿಯಬೇಕೇನು ಹೆಂಗಸು ?

ತಂದೆ:— ಹುಚ್ಚಿ, ಹುಚ್ಚಿ; ಮನೆ ಹಿಡಿಯುವದು ಗಂಡನಿಗೆ ಸರಿಯಲ್ಲ. ಹೊಟ್ಟೆಗಾಗಿ ದುಡಿಯದಿದ್ದರೆ ಹೊಟ್ಟೆಗೆ ಹುಟ್ಟಿದ ಮಗನನ್ನು ಕೂಡ ಹೊರಗೆ ಹಾಕಬಹುದು ತಂದೆ; ಹಾಗೆ ಮಾಡಿಕೊಂಡ ಹೆಂಡತಿಯನ್ನು ಹೊರಗೆ ಹಾಕುವದನ್ನು ನೋಡಿರುವೆಯಾ ಎಲ್ಲಿಯಾದರೂ ?

ಲಲಿತಾ:— ನೀವೇನು ಹೇಳಿದರೂ ಅಷ್ಟೆ; ನನಗೆ ಮದಿವೆಯೆ ಬೇಡ.

ತಂದೆ:— (ಆಶ್ಚರ್ಯ ತೋರಿಸಿ) ಮದಿವೆಯೆ ಬೇಡ! ಲಲಿತಾ, ಲಲಿತಾ,

ನೀನೂ ಹೀಗೆ ಮಾತನಾಡಬೇಕೆ? ತಿಳಿದ ಹುಡುಗಿ ನೀನೆಂದು ತಿಳಿದಿದ್ದೆನಲ್ಲವೆ? (ಕನಿಕರದಿಂದ) ನೀನೇ ಬೇಡ ಎಂದರೆ ಮಾಡುವ ಹಟ ಇದೆಯೆ ನನಗೆ? ನಿನಗೆ ಬೇಡಾದುದು ನನಗೆ ಬೇಕಾಗುವದೆ? ನಿನ್ನ ಹಿತ, ನನ್ನ ಹಿತ; ನಾನಿರುವದು ನೀನಿರುವದಕ್ಕಾಗಿ. (ಕಣ್ಣೀರು ತಂದು) ಇಲ್ಲದಿದ್ದರೆ ಮಹಾಸಾಧ್ವಿ—ಆಕೆ—ನಿನ್ನ ತಾಯಿ - ನನ್ನ ಕೈ ಬಿಟ್ಟು ಹೋಗುವಾಗ್ಗೆ—

ಲಲಿತಾ:— (ಕಣ್ಣೀರು ತಂದು) ಅಪ್ಪಾ, ಯಾಕೆ ಆಗಿಹೋದದ್ದನ್ನು ಸ್ಮರಣೆಗೆ ತಂದು ತಾಪ ಮಾಡಿಕೊಳ್ಳುವಿರಿ? ನಾವು ನೀವು ಸುಖದಿಂದಿದ್ದರೆ ಸ್ವರ್ಗದಿಂದ ನಮ್ಮ ಸುಖ ನೋಡುತಾ ಸುಖದಿಂದಿರುವಳು ನನ್ನ ತಾಯಿ. ನಿಮ್ಮ ಸುಖ ಆಕೆಯ ಸುಖ ಅಲ್ಲವೆ?

ತಂದೆ:— (ಉದ್ವೇಗದಿಂದ) ನನ್ನ ಸುಖ! ನನಗೆಲ್ಲಿ ಬೇಕಾಗಿದೆ ಸುಖ? ನೀನೇ ನನ್ನ ಸುಖ, ಲಲಿತಾ.

ಲಲಿತಾ:— (ಮೇಲಿನಂತೆ) ಹಾಗಾದರೆ ಯಾಕೆ ಇಲ್ಲದುದರ ವಿಚಾರ ಮಾಡಿ ಕಷ್ಟಬಡುವಿರಿ? ನಿಮ್ಮ ಸುಖಕ್ಕಾಗಿಯೆ ನಿಮ್ಮನ್ನೆಂದಿಗೂ ಬಿಟ್ಟುಹೋಗುವದಿಲ್ಲ ಈ ಲಲಿತಾ.

ತಂದೆ:— (ನಗುವ ಯತ್ನದಿಂದ) ನನ್ನ ಲಲಿತಾ ಬುದ್ಧಿಶಾಲಿ ಎಂದು ನೋಡಿ (ಮೇಲೆ ನೋಡುತ್ತ) ಆಕೆ ಈಗ್ಗೆ ಆನಂದಬಡುತಾ ಇರಬಹುದಲ್ಲವೆ? ಲಲಿತಾ, ನಿನ್ನ ತಾಯಿಗೆ ಜರುವಾಗ್ಗೆ ಲಭಿಸಲಿಲ್ಲ. ಆದರೂ ಸಾಯುವಾಗ್ಗೆ "ನನಗಿನ್ನು ಜಗತ್ತಿನಲ್ಲಿ ಏನಿದೆ? ಎಲ್ಲಿಯಾದರೂ ದೇಶಸಂಚಾರ ಮಾಡುವೆ" ಎಂದು ನಾನು ಹೇಳಿದರೆ ಕಣ್ಣೀರು ತುಂಬಿ,

ಮುಂಜಾವಿನ ಕಮಲದ ಹಾಗೆ ಅರಳುವ ಮುದ್ದು ಮುಖದಿಂದ "ನನ್ನ ಲಲಿತೆಯದೊಂದು ಮದಿವೆ ಮಾಡಿದರೆ ನನ್ನ ಆತ್ಮಾ ಸಂತೋಷದಿಂದ ಕಾಲಕಳೆಯುವದು" ಎಂದು ಹೇಳಿ— (ಮಾತು ಮುಗಿಸದೆ ಮುಖ ಮುಚ್ಚುವನು.)

ಲಲಿತಾ:— (ಗದ್ಗದಳಾಗಿ) ಅಪ್ಪಾ, ಅಪ್ಪಾ, ನಿಮ್ಮ ಕಷ್ಟ ಎಷ್ಟು ಎನ್ನುವದು ಗೊತ್ತಿಲ್ಲವೆ ನನಗೆ? (ಮೇಲೆ ನೋಡಿ ಕೈಮುಗಿದು) ಅಮ್ಮಾ, ನಿನ್ನ ಮಗಳು ಕೆಟ್ಟಾಕೆ ಎಂದು ತಿಳಿಯಬೇಡಮ್ಮಾ; ನೀನು ಹೇಳಿದಹಾಗೆ ಮಾಡಲು ಸೆರಗುಸುತ್ತಿ ಸಿದ್ಧಳಿರುವಳಮ್ಮಾ.

ತಂದೆ:— (ಆನಂದಾತಿರೇಕದಿಂದ) ಲಲಿತಾ, ನನ್ನ ಮುದ್ದು ಮಗೂ, ನೀನು ಸಣ್ಣ ಮನಸಿನಾಕೆ ಎಂದಿಗೂ ಅಲ್ಲ ಎಂಬೋದು ನನಗೆ ಎಂದಿನಿಂದಲೊ ಅಭಿಮಾನ.

ಲಲಿತಾ:— (ದೈನ್ಯದಿಂದ) ಒಂದುಸಲ ನನ್ನ ಮನಸ್ಸಿಗೆ ಬಂದಂತೆ ಮಾಡಿಕೊಂಡರೆ ನಿಮಗೆ ಇಷ್ಟವಲ್ಲವೆ?-ಹೆಂಗಸರೇನು ಸ್ವತಂತ್ರ ಅಲ್ಲವೆ?— (ಹೆಮ್ಮೆಯ ಹಟದಿಂದ) ನಾನು ಸಣ್ಣಾಕೆಯೂ ಅಲ್ಲ.

**ತಂದೆ:**— ನೀನು ಸಣ್ಣಾಕೆ ಅಲ್ಲ ಎಂಬುವದೇ ನಿನಗೆ ತಿಳುಹಿಸಿಕೊಡಬೇಕಾಗಿದೆ.—ನಿನ್ನ ಮನಸ್ಸಿಗೆ ಬಂದಾಗ್ಗೆ! ಆದರೆ ನಿನ್ನ ಮನಸ್ಸಿಗೆ ಬಂದಾಗ್ಗೆ ನೀನು ಎರಡನೆಯವರ ಮನಸ್ಸಿಗೆ ಬರುವೆಯೊ ಇಲ್ಲವೊ ಯಾರಿಗೆ ಗೊತ್ತು?

ಲಲಿತಾ:— (ತಿರಸ್ಕಾರದಿಂದ) ಎಂದಿಗೂ ಎಲ್ಲಿಯೂ ಆಗಿಯೆ ಇಲ್ಲ ಇಂತಹಾ ಮದಿವೆ! ಕಾಳಿದಾಸನ ನಾಟಕದೊಳಗಿನ

ಶಕುಂತಲಾ ತನ್ನ ಮನಸ್ಸಿಗೆ ಬಂದಾಗ್ಗೆ ಮಾಡಿಕೊಂಡಳು ತನ್ನ ಮನಸ್ಸಿಗೆ ಬಂದವನನ್ನು.

ತಂದೆ:— ಅದೆಲ್ಲ ಸರಿ ನಾಟಕದೊಳಗೆ. ನಾಳೆ ದುಷ್ಯಂತನಂತೆ ಗಂಡಂದಿರು ತಂತಮ್ಮ ಹೆಂಡಂದಿರನ್ನು ಬಿಟ್ಟುಬಿಟ್ಟರೆ— ನಡೆಯುವದು ಹೇಗೆ?—ನನ್ನ ಮಾತು ಕೇಳಿಕೊ.—ಈ ಗ್ರಂಥದೊಳಗಿನ ವಿದ್ಯಾ ವ್ಯವಹಾರಕ್ಕೆ ಉಪಯೋಗ ವಿಲ್ಲ. ವ್ಯವಹಾರಕ್ಕೆ ಬೇಕು ಅನುಭವ. ಈಗ್ಗೆ ನೋಡು, ನೀವೆಲ್ಲ ನಾಲ್ಕು ಹುಡುಗ–ಬುದ್ಧಿಯವರು ಕೂಡಿ ಹಳೆಯ ಪದ್ಧತಿ ಕೆಟ್ಟಾ ಎಂದು ಕೂಗುವಿರಿ. ನನ್ನ ಮದಿವೆ ಆದದ್ದು ಹಳೆಯ ಪದ್ಧತಿಯಿಂದಲೆ. ಆದರೂ— (ಕನಿಕರ ತೋರಿಸಿ) ಆದರೂ ನೋಡು, ನಿನ್ನಂತಹಾ ಮುದ್ದುಮಗಳು, ಬುದ್ಧಿಶಾಲಿ ಮಗಳು, ಹುಟ್ಟಿಲ್ಲವೆ ನನಗೆ? (ಸುಳ್ಳುನಗೆಯಿಂದ) ಬುದ್ಧಿಶಾಲಿ ಅಂದರೆ ಶಾಲೆಯ ಬುದ್ಧಿಯವರಲ್ಲ. ಅದಕ್ಕೆ ಹೇಳುವೆ, ಹಳೆಯದು ಯಾವದೂ ಕೆಟ್ಟದು ಇರಬಹುದು, ಎಲ್ಲವೂ ಕೆಡಕು ಇರಬಹುದು. ಆದರೆ ಅನುಭವ ಯಾವಾಗಲೂ ಹಳೆಯದೆಂದು ಅದೆಲ್ಲ ಕೆಟ್ಟದು ಎಂದರೆ ನಡೆಯುವದೆ?

ಲಲಿತಾ:— (ಅವನ ಹತ್ತಿರ ಬಂದು ಕುಳಿತು) ಅಪ್ಪಾ, ಅಪ್ಪಾ, ಇದೇನು? ಅನುಭವ ಕೆಟ್ಟದು ಎಂದೆನೆ ನಾ?—ಅವರವರ ಅನುಭವ ಅವರಿಗೆ.

ತಂದೆ:— (ವಾತ್ಸಲ್ಯದಿಂದ ಅವಳ ಮೈಮೇಲೆ ಕೈಯ್ಯಾಡಿಸುತ್ತ) ಅಲ್ಲ, ಹಿರಿಯರ ಅನುಭವ ಹುಡುಗರಿಗೆ. ಹಿರಿಯರು ದುಡಿಯುವದು ಹುಡುಗರು ನಡೆಯುವದಕ್ಕೆ. ನೋಡು. ಇಂದಿನ

ವರೆಗೆ ನಿನಗೆ ಯಾವದನ್ನೂ ಹೇಳಬಾರದೆಂದು ಮಾಡಿದ್ದೆ. —ನಾವು ಬಡವರು. ಆದರೂ ಮಗಳಿಗೆ ಕಲಿಯುವ ಉತ್ಸಾಹ–ಯೋಗ್ಯತಾ ಇದೆಯೆಂದು ಕಷ್ಟಬಟ್ಟು ಕಾಸು ಕೂಡಿಸಿದೆ.

ಲಲಿತಾ:— (ಕಳಕಳಿಯಿಂದ ಅವನನ್ನು ದಿಟ್ಟಿಸುತ್ತ) ಇದೇನು ನನಗೆ ಗೊತ್ತಿಲ್ಲವೆ, ಅಪ್ಪಾ? ಅದಕಾಗಿಯೆ ದುಡಿದು ದುಡ್ಡು ತುಂಬಬೇಕು ಎಂದು ಹೇಳಿದೆ. ಹೊತ್ತಿಲ್ಲದ ಹೊತ್ತಿನಲ್ಲಿ ಮತ್ತೆ ಮದಿವೆಯುದೊಂದು ಯಾಕೆ ವೆಚ್ಚ?

ತಂದೆ:— (ಸಮಾಧಾನದಿಂದ) ಮದಿವೆ ವೆಚ್ಚ ಅಂದರೆ ವ್ಯವಹಾರ ನಡೆಯುವದು ಹೇಗೆ, ನನ್ನ ಮಗೂ? ಕಾಸಿನಿಂದ ಕಾಸು ಕೂಡಿಸುವದು ಬುದ್ಧಿಯ ಕೆಲಸ; ವೆಚ್ಚಮಾಡಿ ದುಡ್ಡು ಹೆಚ್ಚಿಸುವದು ಅನುಭವದ ಕೆಲಸ. ನೋಡು—ನನ್ನ ಮಾತು ಕೇಳಿಕೊ. ನನಗೇನಿನ್ನು ದುಡಿಯುವ ಸಾಮರ್ಥ್ಯ ಇಲ್ಲ, ಕೂಡಿಸಿಟ್ಟ ಹಣ ಇಲ್ಲ. ಏನೆ ಆಗಲಿ ಎಂದು, ನಿನ್ನದೊಂದು ಮದಿವೆ ಮಾಡಿಬಿಟ್ಟರೆ ನೀನು ನಿನ್ನ ಮನೆಗೆ ಹೋಗುವೆ, ನಾನು ಆರು ತಿಂಗಳು ಮಗಳನ್ನೂ ಆರು ತಿಂಗಳು ಅಳಿಯನನ್ನೂ ನೋಡಿಕೊಳ್ಳುತಾ ಕಾಲಕಳೆಯುವೆ.

ಲಲಿತಾ:— (ಸಿಟ್ಟಿನ ಸೋಗಿನಿಂದ) ನೀವು ಮತ್ತೆ ಅದೇ ಮಾತನ್ನೆ ಬೆಳೆಸಿದರೆ ನನಗಂತೂ ಬೇಡ. (ಎದ್ದು ಮತ್ತೆ ಪೆಟ್ಟಿಗೆಯ ಮೇಲೆ ಕುಳಿತುಕೊಂಡು) ಎಲ್ಲಿಗಾದರೂ ಹೋಗಿಬಿಡುವೆನಮ್ಮಾ, ಇದು ಯಾರಿಗೆ ಬೇಕು?

ತಂದೆ:— (ಕನಿಕರ ತೋರಿಸಿ) ಎಲ್ಲಿಯಾದರೂ ಹೋಗುವದಕ್ಕಿಂತ

ಇಂತಹಾದ್ದೊಂದು ಜಾಗೆ ಗೊತ್ತುಮಾಡಿಕೊಂಡು ಹೋಗುವದು ಒಳಿತಲ್ಲವೆ?

ಲಲಿತಾ:— (ಕಾಲು ಅಪ್ಪಳಿಸುತ್ತ) ಎಲ್ಲಿಯಾದರೂ ಹೋಗುವೆ ಜೀವ ಬಿಟ್ಟುಬಿಡುವೆ.

ತಂದೆ:— (ಒಮ್ಮೆಲೆ ಅವಳನ್ನು ನೋಡಿ) ಏನಂದಿ?

ಲಲಿತಾ:— (ಮೊದಲಿನಂತೆ, ಗಟ್ಟಿಯಾಗಿ) ಎ—ಲ್ಲಿ—ಯಾ—ದ—ರೂ ಹೋ–ಗು–ವೆ ಜೀ–ವ ಬಿ–ಟ್ಟು–ಬಿ–ಡು–ವೆ.

ತಂದೆ:— (ಮಗಳನ್ನು ಆಶ್ಚರ್ಯದಿಂದಲೂ ಸಿಟ್ಟಿನಿಂದಲೂ ದಿಟ್ಟಿಸಿ ಕೊನೆಗೆ ತಿರಸ್ಕಾರದಿಂದ) ಜೀವ ಬಿಟ್ಟುಬಿಡುವೆಯಾ? ಜೀವ ಕೊಟ್ಟವನ ಮುಂದೆ ಜೀವ ಬಿಡುವ ಹೆದರಿಕೆ ಹಾಕುವೆಯಾ? ಯೋಗ್ಯ. ವಿದ್ಯೆ ಕಲಿತು ನನ್ನ ಮಗಳು ಕೊನೆಗೆ ತನ್ನ ಜೀವ ಬಿಟ್ಟುಕೊಡಲಿಕ್ಕೆಯೆ ಯೋಗ್ಯವೆಂದು ತಿಳಿದಳಲ್ಲವೆ? ಈ ನಿನ್ನ ಯೋಗ್ಯತೆ ತಿಳಿದಿದ್ದರೆ ನಾನೆಲ್ಲಿ ಕಲಿಸಿ ದುಡ್ಡು ಹಾಳುಮಾಡಿಕೊಳ್ಳುತ್ತಿದ್ದೆ? ಜೀವ ಬಿಟ್ಟುಕೊಡುವ ಪ್ರಶ್ನೆಯೆ ಇದ್ದರೆ ನಿನ್ನಗಿಂತ ಮೊದಲು ಹುಟ್ಟಿದವನು, ನಿನ್ನ ಸಲುವಾಗಿ ಆಯುಷ್ಯ ಸುಟ್ಟವನು ನಾನೇ ಮೊದಲು ಜೀವ ಬಿಟ್ಟುಬಿಡುವೆ. (ಎದ್ದುನಿಂತು) ಇಂತಹ ಮಗಳ ತಂದೆಯೆಂದು ಜೀವದಿಂದಿರುವದು ಯಾರಿಗೆ ಇಷ್ಟ?

ಲಲಿತಾ:— (ಅಡ್ಡಗಟ್ಟಿ) ಅಪ್ಪಾ, ಅಪ್ಪಾ, ಸಿಟ್ಟಿಗೇಳಬೇಡಿ. ನಿಮ್ಮ ಮನಸ್ಸಿನಂತೆ ಆಗಲಿಲ್ಲವೆಂದರೆ ನಿಮಗೆ ಇಷ್ಟು ಕೆಡಕು ಅನಿಸುವದಲ್ಲವೆ? ನನಗಾದರೂ ಮನಸ್ಸಿಲ್ಲವೆ? ನನ್ನ

ಮನಸಿನಂತೆ ಮಾಡುವದೆಂದರೆ ನಿಮ್ಮ ಮನಸ್ಸಿನ ವಿರುದ್ಧವಾಯಿತೆ? ಅಪ್ಪಾ, ಅಪ್ಪಾ, (ಬಿಕ್ಕುವಳು).

ತಂದೆ:— (ಅವಳ ಮುಖವನ್ನೆತ್ತಿ) ಛೀ, ಹುಚ್ಚೀ, ವ್ಯವಹಾರ ಜ್ಞಾನವಿಲ್ಲಾ ಎನ್ನುವದು ಇದಕ್ಕೆ ಮತ್ತೆ ನೀನೇ ಅಳುವೆ. ನಾನೇನು ನಿನ್ನ ಬಲಿ ಮಾಡುವೆನೆ, ಬಲುಮೆ ಮಾಡುವೆನೆ? ಕೆಟ್ಟಗಾಲ ಬರದಿದ್ದರೆ ನಾನೆಲ್ಲಿ ನಿನ್ನನ್ನು ಸಂಕಟಕ್ಕೆ ಈಡು ಮಾಡುತ್ತಿದ್ದೆ?

ಲಲಿತಾ:— (ದೈನ್ಯದಿಂದ) ಅಪ್ಪಾ, ಏನಾದರೂ ಮಾಡಿರಿ, ನೀವು ಹೇಳಿದಂತೆ ಮಾಡುವೆ, ಮದಿವೆ ಮಾಡಿಕೊಳ್ಳುವೆ; ಆದರೆ—

ತಂದೆ:— (ಸಂಶಯದಿಂದ) ಆದರೆ—ಆದರೇನು? ಲಲಿತಾ, ಇದು ಆಗಲೇಬೇಕಾಗಿದೆ.

ಲಲಿತಾ:— (ದೈನ್ಯದಿಂದ) ಆಗುವದಿಲ್ಲವೆಂದು ಹೇಳಿದೆನೆ, ಅಪ್ಪಾ? ಅಮ್ಮನಲ್ಲಿ ನನ್ನ ಪ್ರೇಮ; ಆದರೆ ನನ್ನಲ್ಲಿ ಮಾತ್ರ ನಿಮ್ಮ ವಿಶ್ವಾಸವಿಲ್ಲವೆ?

ತಂದೆ:— (ನಕ್ಕು) ಹುಚ್ಚೀ, ವಿಶ್ವಾಸವಿಲ್ಲದಿದ್ದರೆ ಆಪ್ತಾಲೋಚನೆ ಮಾಡುತ್ತಿದ್ದೆನೆ ನಿನ್ನ ಕೂಡ?

ಲಲಿತಾ:— ಆ ಪ್ರೇಮದ ಆಣೆ ಇಡಿರಿ ನನಗೆ, ಆ ವಿಶ್ವಾಸದ ಆಣೆ ಇಡಿರಿ ನನಗೆ, ಆ ಪ್ರೇಮದ ವಿಶ್ವಾಸದಿಂದ ಈ ಮದಿವೆಯ ಮಾತು ಮುಂದೆ ಹಾಕಿರಿ.

ತಂದೆ:— (ಬೇಜಾರದಿಂದ) ಛೆ, ಹುಡುಗರ ಕೂಡ ಹಂಚಿಕೆ ಹಾಕುವದೇ ಶುದ್ಧ ಮೂರ್ಖತನ. ಲಲಿತಾ, ಮುಂದೆ ಹಾಕುವದೇನು ನಮ್ಮ ದುರ್ದೈವ. ಈಗ್ಗೆ ನಿನ್ನ ಮದಿವೆ

ಮಾಡಬೇಕೆಂದು ಸಾಲ ತೆಗೆದಿರುವೆ. ಮದಿವೆ ಮುಂದೆ ಸೂಕಿ ಸುಮ್ಮಸುಮ್ಮನೆ ಬಡ್ಡಿ ತೆತ್ತಬೇಕೆ? ಅದೂ ಆಗಲಿ ಎಂದರೆ ಸಾಲದ ಹಣ ವೆಚ್ಚ ಆಗಿ ಮತ್ತೆ ಮದಿವೆಗೆ ಸಾಲ ತೆಗೆಯಲೇಬೇಕು. ಇನ್ನೆಷ್ಟುಸಲ ಹೇಳಬೇಕು ಸಾಹುಕಾರರಿಗೆ ನನ್ನ ಮಗಳ ಮದಿವೆ ಎಂದು? ಇದ್ದುದೊಂದು ಮಗಳು, ಅದರದೊಂದು ಮದಿವೆ. ಎರಡನೆಯ ಸಲ ಕೇಳಹೋದರೆ ಬಾಯಿಗೆ ಬಂದಂತೆ ಆಡಿಕೊಳ್ಳಲಿಕ್ಕಿಲ್ಲವೆ?

ಲಲಿತಾ:— (ಆಶ್ಚರ್ಯದಿಂದ ದಿಟ್ಟಿಸಿ, ಕೋಪದಿಂದಲೂ ಕೊಂಚ ತಿರಸ್ಕಾರದಿಂದಲೂ) ಅಪ್ಪಾ, ನಿಮ್ಮ ಮುದ್ದು ಮಗಳಲ್ಲವೆ ನಾನು? ಎಲ್ಲಿಯೊ ಒಂದು ಸಾಲ ತೆಗೆದಿರಿ ಎಂದು ಇಲ್ಲಿಯೆ ನನ್ನ ಮದಿವೆಯಾಗಬೇಕೆ? ತಂದೆಗೆ ಸಾಲ ಎಂದರೆ, ಮಗಳಿಗೆ ಶೂಲವೆ? ಅಪ್ಪಾ, ಅಪ್ಪಾ, ಇದೇ ನಿಮ್ಮ ಮಗಳ ಮೇಲಿನ ಪ್ರೇಮವಿದ್ದರೆ ಜೀವ ಹೋದರೂ ನಾನು ಮದಿವೆ ಮಾಡಿಕೊಳ್ಳುವದಿಲ್ಲ.

ತಂದೆ:— ನೀನು ಮದಿವೆ ಮಾಡಿಕೊಳ್ಳದಿದ್ದರೆ ಹೋಗುವದು ನನ್ನ ಜೀವ. (ಒಮ್ಮೆಲೆ ತಡೆದು ವ ತ್ತೆ ತಡೆಯದ ಸಿಟ್ಟಿನ ಆವೇಶದಿಂದ) ಲಲಿತಾ, ವಿದ್ಯೆಕೊಟ್ಟು ಬುದ್ಧಿ ಕಲಿಸುವದು ತಂದೆಯ ಧರ್ಮ; ಜೀವದಿಂದಿರುವವರೆಗೆ ವಿದ್ಯೆ ಕೊಡಿಸಿರುವೆ, ಇನ್ನು ಜೀವ ಕೊಟ್ಟು ಬುದ್ಧಿ ಕಲಿಸುವೆ. ಇದೊ, ವಿಚಾರ ಮಾಡು (ತಿರಸ್ಕಾರದಿಂದ) ವಿಚಾರ ಮಾಡುವದು ನಿನಗೆ ಯಾಕೆ? ನಾನೇ ವಿಚಾರ ಮಾಡಿರುವೆ, ನಿನ್ನ ಮದಿವೆಯ ನಿಶ್ಚಯ ಮಾಡಿರುವೆ. ನೀನು ಮಾಡುವದು ಮದಿವೆಯ ನಿನ್ನ ಸಿದ್ಧತೆ, ಇಲ್ಲವೆ ಮುಂದಿನ ನನ್ನ

ಸಿದ್ಧತೆ. (ಸಿಟ್ಟಿನಿಂದ ಹೋಗುವನು. ಲಲಿತೆಯು ಏನೂ ತಿಳಿಯದವಳಂತೆ ಎದ್ದು ಅವನನ್ನು ನೋಡುವಳು. ಬಾಗಿಲು-ಸಪ್ಪಳವಾದ ಕೂಡಲೆ ಎಚ್ಚತ್ತವಳಂತೆ ಉಸುರ್ಗರೆದು, ಎರಡೂ ಕಪೋಲಗಳನ್ನು ಕೈಗಳಲ್ಲಿಟ್ಟುಕೊಂಡು ಪೆಟ್ಟಿಗೆಯ ಮೇಲೆ ಕುಳಿತುಕೊಳ್ಳುವಳು. ಇಷ್ಟರಲ್ಲಿ ಕೊಂಕಣ್ಣನೂ ಶ್ರೀಧರನೂ ಬರುವರು. ಲಲಿತೆಯ ಲಕ್ಷ್ಯವೇ ಇಲ್ಲ ಅವರ ಕಡೆಗೆ.)

**ಕೊಂಕಣ್ಣ:**— (ಎಲ್ಲಕಡೆಯೂ ನೋಡಿದಂತೆ ಮಾಡಿ) ಎಲ! ಇಲ್ಲಿಯೂ ಇಲ್ಲವಲ್ಲ! ಲಲಿತಾ, ಶ್ರೀಧರನಿಗೆ ನಿನ್ನ ತಂದೆಯ ಪರಿಚಯ ಮಾಡಿಕೊಡಬೇಕೆಂದರೆ ಕೂಡಿಯೆ ಬರವಲ್ಲದಲ್ಲ ಯೋಗ.

ಶ್ರೀಧರ:— (ಲಲಿತೆಯನ್ನು ನೋಡುತ್ತ) ಹಾಳಾಗಲಿ ನಿನ್ನ ಯೋಗ. ನೋಡಿದೆಯಾ ಈ ಧ್ಯಾನ?

**ಕೊಂಕಣ್ಣ:**— (ನೋಡಿ) ಇದೇನು ಧ್ಯಾನವೊ, ಅನುಸಂಧಾನವೊ? (ಏನೊ ಸ್ಮರಣೆಗೆ ಬಂದವನಂತೆ ಒಮ್ಮೆಲೆ) ಓಹೊ, ಶ್ರೀಧರಾ, ಹೇಳಲು ಮರೆತೇ ಬಿಟ್ಟಿದ್ದೆ. ಲಲಿತಾ ಯಾಕೆ ಬಂದಾಳೆ ಗೊತ್ತಿದೆಯೆ?

ಲಲಿತಾ:— (ಕುಳಿತಲ್ಲಿಯೆ, ಅಸಹ್ಯದಿಂದ) ಕೊಂಕುಬುದ್ಧಿ ಸರಿಮಾಡಲಿಕ್ಕೆ.

**ಕೊಂಕಣ್ಣ:**— (ನಕ್ಕು) ಅದಕಾಗಿ ಎಲ್ಲರೂ ಕೊಂಕ-ಬುದ್ಧಿಯುವರಾದರೆ ಸರಿ.

ಶ್ರೀಧರ:— (ಆಶ್ಚರ್ಯದಿಂದ ಇಬ್ಬರನ್ನೂ ನೋಡಿ, **ಕೊಂಕಣ್ಣ**ನಿಗೆ) ಲಲಿತಾ ಯಾಕೆ ಬಂದಾಳೆ?

**ಕೊಂಕಣ್ಣ:**— ಅಭ್ಯಾಸದಿಂದ ಯೋಗ ಎಂದು ಹೇಳಲಿಲ್ಲವೆ ಪತಂಜಲಿ ಎಂಬುವ ಮಹಾಶಯ? ಅಭ್ಯಾಸವಾದ ಮೇಲೆ ಯೋಗ. ಯಾವ ಯೋಗ? ಅಭ್ಯಾಸದ ಉಪಯೋಗ.

ಶ್ರೀಧರ:— (ಬೇಜಾರದಿಂದ) ಒಂದಿಷ್ಟು ನಿನ್ನ ಬುದ್ಧಿಯು ಉಪಯೋಗ ಮಾಡಿ ಹೇಳಬಾರದೆ?

ಕೊಂಕಣ್ಣ:— ನಾನು ಹೇಳುವಾಗ್ಗೆ ನಿನ್ನ ಬುದ್ಧಿಯು ಉಪಯೋಗ ಮಾಡಬಾರದೆ? (ನಗೆಯಿಂದ) ಲಲಿತಾ ಒಂದದ್ದು ಲಲಿತ-ಕಲಾಪ್ರದರ್ಶನಕ್ಕೆ. Exhibition, ತಿಳಿಯಿತೆ?

ಶ್ರೀಧರ:— (ಸಂಶಯದಿಂದ) ಅಂದರೆ?

ಕೊಂಕಣ್ಣ:— Excursion.

ಶ್ರೀಧರ:— ಅಂದರೆ

ಕೊಂಕಣ್ಣ:— ಅಂದರೇನು ಗೊತ್ತಿಲ್ಲವೆ? ಶಾಲೆ–ಕಾಲೇಜಿನೊಳಗಿದ್ದಾಗ್ಗೆ ಹೋಗುತ್ತಿದ್ದೆವು ನೋಡು, ಪ್ರವಾಸದ ಮೇಲೆ? ದೇಶ ನೋಡಲಿಕ್ಕೆ? ಆ excursion ಬೇರೆ. ಆದರೆ ಹೆಣ್ಣು-ಹುಡುಗಿಯರ excursion ನಮ್ಮ ಹಾಗೆ ಕಲಿಯುವಾಗ್ಗೆ ಅಲ್ಲ, ಕಲಿತ ಮೇಲೆ. ಲಲಿತಾ ಈಗ್ಗೆ excursion ಎಂದು ಬಂದಾಳೆ; ನಮ್ಮ ಹಾಗೆ, ಕಟ್ಟಿದ ಮನೆ ನೋಡುವದಕ್ಕೆ ಅಲ್ಲ ಮನೆ ಎಲ್ಲಿ ಕಟ್ಟುವದು ನೋಡಲಿಕ್ಕೆ.

ಶ್ರೀಧರ:— (ಲಲಿತೆಗೆ) ಲಲಿತಾ, ಕೊಂಕ ಹೇಳುವದು ನಿಜವೆ? (ಲಲಿತೆಯು ಕೆಳಗೆ ಮುಖ ಮಾಡುವಳು) ಲಲಿತಾ, ಸುಳ್ಳೆಂದು ಹೇಳು, ಕೊಂಕನ ವಿನೋದ ಎಂದು ಹೇಳು.

ಕೊಂಕಣ್ಣ:— (ಸಿಟ್ಟಿನ ಸೋಗಿನಿಂದ) ಸುಳ್ಳು ಎಂದರೆ ಕೊಂಕನ ವಿನೋದ ಎಂದು ಅಮರಕೋಶದಲ್ಲಿ ಕೊಟ್ಟಿದೆಯೇನೊ? ಸುಳ್ಳಲ್ಲ, ಲಲಿತೆಯ ತಂದೆ ನನಗೆ ಹೇಳಿದರು, ಎಲ್ಲಿಯಾದರೂ ವರ ನನ್ನು ನೋಡಿ ಮದಿವೆ ಹೂಡಬೇಕೆಂದು. ಅಲ್ಲೊ, ಶ್ರೀಧರಾ, ಅವಳ ಮದಿವೆ ಆದರೆ ನಿನಗೆ ಯಾಕೆ ಇಷ್ಟು ಹಳಹಳಿ.

ಶ್ರೀಧರ:— ಹಳಹಳಿಯುಲ್ಲ, ಆದರೆ ನಮ್ಮ ತತ್ವ ಎಲ್ಲಿಗೆ ಹೋಗು ವದು ಎಂದು ಕಳಕಳಿ.

**ಕೊಂಕಣ್ಣ**:— ಮಂದಿಯು ಮದಿವೆಗೆ ನಿನ್ನದೊಂದು ತತ್ವ.

ಶ್ರೀಧರ:— (**ಕಳಕಳಿಯಿಂದ**) ಲಲಿತಾ, ಹೇಳು, ತತ್ವಕ್ಕೆ ವಿರೋಧ ವಾಗದೆ ನಿನ್ನ ಮದಿವೆ ಆಗುವದೆಂದು ಹೇಳಿಬಿಡು.

**ಕೊಂಕಣ್ಣ**:— ನಿನ್ನ ಮದಿವೆಯು ತತ್ವ ಯಾವದು ಎಂದು ಹೇಳು ನೋಡುವ.

ಶ್ರೀಧರ:— (ಸಿಟ್ಟಿನಿಂದ) ಕೊಂಕಾ, ಸಾಕುಮಾಡು ನಿನ್ನ ವಿನೋದ. ಮದಿವೆಯು ತತ್ವ ಯಾವದು ಅಂತೆ! ನಿನಗೇನು ಮಾಡು ವದಿದೆ ಅದನ್ನು ಕೇಳಿ? ಉತ್ಸಾಹವಿದ್ದವರ ಕೆಲಸ ಅದು ಸಾಮರ್ಥ್ಯ ಇದ್ದವರ ಕೆಲಸ ಅದು, ಬುದ್ಧಿ ಇದ್ದವರ ಕೆಲಸ ಅದು.

**ಕೊಂಕಣ್ಣ**:— (ತಲೆತೂಗಿ) ನನಗೆಲ್ಲ ಗೊತ್ತಿದೆ, ಅದಕಾಗಿಯೆ ಕೇಳಿದ ತತ್ವಕ್ಕೂ ನಿನಗೂ ಯಾವ ಸಂಬಂಧ ಅಂತೆ.—ಏನು ಮದಿವೆ ಎಂದರೆ ಶರೀರಸಂಬಂಧ ಎಂದು ಹೇಳುವೆಯೊ

ಶ್ರೀಧರ:— (ಸಿಟ್ಟಿನಿಂದ) ಮದಿವೆ ಎಂದರೆ ಶರೀರಸಂಬಂಧ ಅಂತೆ! ಹಾಗೆ ಹೇಳುವವರು ಪಶುಗಳು, ಕೇವಲ ಶರೀರದ ಪಶುಗಳು, ಬುದ್ಧಿ ಇಲ್ಲದ ಪಶುಗಳು. ಆ ಹಳೆಯ ಸಂಬಂಧವನ್ನೆಲ್ಲ ಹೊಳೆ ಕಾಣಿಸಿ ಮನುಷ್ಯನಿಗೆ ಬುದ್ಧಿ ಇದೆ ಎಂದು ತೋರಿಸಬೇಕಾಗಿದೆ.

**ಕೊಂಕಣ್ಣ**:— ಅಯ್ಯೋ! ಇಷ್ಟಾದರೂ ಬುದ್ಧಿ ಇದೆ ಎಂದು ಸಿದ್ಧ ಮಾಡುವ ಸಡಗರವೆ ಅಹುದಲ್ಲೋ ನಿಮ್ಮದು?

ಶ್ರೀಧರ:— (ತಡೆಯದೆ) ನಿಮ್ಮಂತಹರಿಗೂ ಬುದ್ಧಿ ಇದೆ ಎಂದು ತೋರಿಸುವ ಹಟ ನಮ್ಮದು. ಮದಿವೆ ಎಂದರೆ ಆ ಬುದ್ಧಿಯ ವಿಕಾಸ ಎಂದು ತೋರಿಸುವ ಹಟ ನಮ್ಮದು.

ಕೊಂಕಣ್ಣ:— ಇದನ್ನೆಲ್ಲ ಒಂದು ನಿಮಿಷ ಒಪ್ಪಿಕೊಂಡೆನೆಂದು ತಿಳಿ. ಮುಂದೆ, ಪ್ರಸ್ತುತವಿಷಯಸಂಬಂಧವೇನು ಎಂದು ನನ್ನ ಪ್ರಶ್ನೆ.

ಶ್ರೀಧರ:— (ಮೇಲಿನಂತೆ) ಕೊಂಕನಲ್ಲ ನೀನು, ಮಂಕನಿರುವೆ. ಸಮಾಜ ಉಳಿದು ಬೆಳೆಯುವದಕ್ಕೆ ಮದಿವೆ ಒಂದುತ್ತಮ ಸಾಧನ, ಅಲ್ಲವೆ? ರೂಢಿಯೊಳಗಿನ ಮದಿವೆ ಎಂದರೆ ಮಕ್ಕಳ ವಧವೆ! ಇದ್ದುದನೆಲ್ಲ ಒಳೆದುಹಾಕಿ, ಇಲ್ಲದುದರ ಧೂಳ ಎಬ್ಬಿಸುವ ಹಿರಿಯರ ಹುಚ್ಚುತನದ ಬೇಸಗೆಯ ಮುಹೂರ್ತದೊಳಗೆ ಒತ್ತಿಹೋಗುವದಿಲ್ಲವೆ ಮಕ್ಕಳ ಸುಖ? ಅನುಕೂಲವಲ್ಲದ ಧರ್ಮಕ್ಕೆ ಬೆದರಿ, ಪ್ರತಿಕೂಲ ಮಾಡಿ, ಮುಚ್ಚಿಕೊಳ್ಳುವದಕ್ಕಾಗಿ ಗದ್ದರಿಸುವ ಹಿರಿಯರ ಹುಚ್ಚುತನದ ಚಳಿಗಾಲದ ಮುಹೂರ್ತದೊಳಗೆ ಗದಗದ ನಡುಗಿ ಸಾಯುವದಿಲ್ಲವೆ ಮಕ್ಕಳ ಸುಖ? ಪ್ರೇಮ ಬಿತ್ತಿ ಸುಖ ಬೆಳೆದುಕೊಳ್ಳುವ ತಿಳುವಳಿಕೆಯ ಮಳೆಗಾಲದ ಮುಹೂರ್ತದೊಳಗೆ ಮದಿವೆ ಬೇಡವೆ ಸಮಾಜ ಬೇಕೆನಿಸಿದರೆ?—ಅದಕಾಗಿ ಮದಿವೆಗೆ ಹಿರಿಯರ ಹೆದರಿಕೆಗಿಂತ ಮಕ್ಕಳ ಪ್ರೇಮವೆ ಬೇಕೆಂಬುವದು ನಮ್ಮ ಹಟ. (ಲಲಿತೆಗೆ) ಲಲಿತಾ, ಹೇಳು, ತತ್ವಕ್ಕೆ ವಿರೋಧವೆನಿಸದ ಮದಿವೆ ಇದ್ದರೆ ಸಾಕು.

ಲಲಿತಾ:— (ಗದ್ಗದಳಾಗಿ) ಶ್ರೀಧರ, ಮಾತನಾಡಿಸಬೇಡಿರಿ ನನ್ನನ್ನಿನ್ನು.

ಮಾತಿನಂತೆ ಮಾಡಲಾರದ ನನ್ನಂತಹ ಹೇಡಿ ಹುಡುಗಿ—
(ಮುಖ ಮುಚ್ಚುವಳು)

ಶ್ರೀಧರ:— (ಆಶ್ಚರ್ಯದಿಂದ) ಲಲಿತಾ, ಏನಿದು! ಮನಸ್ಸಿಲ್ಲದೆ ಮದಿವೆಯೆ!

ಲಲಿತಾ:— (ಮುಖವನ್ನು ಮುಚ್ಚಿಯೆ) ತಂದೆಗೆ ಹೆದರಿ—

ಶ್ರೀಧರ:— ತಂದೆಗೆ ಹೆದರಿ? (ಎಂದು ಗದ್ಗದಿಸುವನು)

ಕೊಂಕಣ್ಣ:— ಇದೆಲ್ಲಿಯ ನ್ಯಾಯವೊ, ಶ್ರೀಧರಾ? ತಮ್ಮ ತಂದೆಯ ಮಾತು ತಾವು ಕೇಳಿದರೆ ಮಂದಿಯ ಮಕ್ಕಳಿಗೆ ಯಾಕೆ ಇಷ್ಟು ಸಿಟ್ಟು?

ಶ್ರೀಧರ:— (ಉಸುರ್ಗರೆದು) ನಮ್ಮದೇ ದುರ್ದೈವ. ತಂದೆಯ ಮಾತು ಕೇಳಿ, ಮಂದಿಯ ಮಾತು ಕೇಳಿ ಹಿಂದು ಬಿದ್ದೆವಾದರೂ ಮುಂದೆ ಮಾಡುವದಕ್ಕೆ ಗತಿ ಇಲ್ಲ.

ಲಿಲಿತಾ:— (ಎದ್ದು ದೈನ್ಯದಿಂದ) ಶ್ರೀಧರ, ಏನು ಮಾಡಬೇಕು ಹೇಳ ಬಾರದೆ? ಈ ಹಾಳು ಮದಿವೆಯ ಗಾಳಿ ಕೂಡ ಬೇಡ ನನಗೆ.

ಕೊಂಕಣ್ಣ:— (ಗಂಭೀರವಾಗಿ) ಹಿಂದುಸಮಾಜದಲ್ಲಿ ಹುಟ್ಟಿ ಇಂತಹ ಪ್ರಸಂಗದಲ್ಲಿ ಏನು ಮಾಡಬೇಕೆಂದು ಕೇಳುವೆಯಾ? महाजनो येन गतः स पन्थाः ಹಿಂದಿನವರು ಹಿಡಿದ ಹಾದಿ ಇಂದಿನವರದು.

ಲಲಿತಾ:— (ಸಂಶಯದಿಂದ) ಯಾವ ಹಾದಿ?

ಕೊಂಕಣ್ಣ:— (ಮೊದಲಿನಂತೆಯೆ) ಭಾವಿಯ ಹಾದಿ. (ಶ್ರೀಧರನು ತಿರಸ್ಕಾರ ದಿಂದ ನೋಡುವನು.) ಶ್ರೀಧರಾ, ಇದು ಹಳೆಯ ಜನರ

ನಡತೆಯೆಂದರೆ ಬಿಟ್ಟುಬಿಡು. ಆದರೆ ಇಂಗ್ಲಿಶ ಕಲಿತ ವರು ಕೂಡ ಇಂತಹ ಪ್ರಸಂಗದಲ್ಲಿ ಭಾವಿಯಲ್ಲಿಯೆ ಬೀಳುತ್ತಿದ್ದರೆಂದು ತೋರಿಸಿಕೊಟ್ಟರೆ-? ಶೇಕ್ಸಪೀಅರನ Hamlet ಓದಿಲ್ಲವೆ ನೀನು? ಆ ನಾಟಕದ ನಾಯಿಕೆ ಯಾದ Ophelia ಕೆರೆಯಲ್ಲಿ ಬಿದ್ದು ಸಾಯುವದಿಲ್ಲವೆ?

ಲಲಿತಾ:— (ಸಿಟ್ಟಿನಿಂದ) ಆ ನಾಟಕ ಒರೆದವ ನಿನ್ನಂತಹಾ ಗಂಡಸ; ಹೆಂಗಸು ಬರೆದಿದ್ದರೆ ತಿಳಿಯುತ್ತಿತ್ತು ಯಾರು ಭಾವಿ ಬಿದ್ದು ಸಾಯುತ್ತಿದ್ದರೆಂಬುದು!

ಕೊಂಕಣ್ಣ:— (ನಗೆಯಿಂದ) ಗಂಡಸು ಒರೆದ ನಾಟಕದೊಳಗೆ ಹೆಂಗಸು, ಹೆಂಗಸು ಒರೆದ ನಾಟಕದೊಳಗೆ ಗಂಡಸು ಸಾಯಬೇ ಕೆಂದು ನಿಯಮವೇನು? ಹಾಗಾದರೆ, Romeo–Juliet ನಾಟಕದಲ್ಲಿ ನಾಯಕ–ನಾಯಿಕೆ ಇಬ್ಬರೂ ಸಾಯು ವರು, ಅದನ್ನು ಒರೆದವ ಅರ್ಧನಾರೀನಟೇಶ್ವರನೊ?

ಶ್ರೀಧರ:— (ತಿರಸ್ಕಾರದಿಂದ) ಅರ್ಧನಾರೀನಟೇಶ್ವರರು ನಮ್ಮ ದೇಶ ದಲ್ಲಿಯೆ? ಹೆಂಗಸರಿಗೆ ಹೆಂಗಸುತನ ಇಲ್ಲ, ಗಂಡಸಿಗೆ.—

ಕೊಂಕಣ್ಣ:— (ಸಿಟ್ಟಿನ ಸೋಗಿನಿಂದ) ಓಹೊ, ಇದೇ ನಿನ್ನ ತತ್ವವೆ? ಎರ ಡನೆಯವರಿಗೆಂದು ಬೇಕಾದ್ದು ಹೇಳುವೆ. ನಿನಗೆಯೆ ಇಂತಹ ಪ್ರಸಂಗ ಬಂದರೆ ತಂದೆಯ ಮಾತು ಮೀರು ವೆಯಾ?

ಶ್ರೀಧರ:— (ಹೆಮ್ಮೆಯಿಂದ) ಮಾತು ಮೀರುವ ಪ್ರಶ್ನೆಯೆ ಇಲ್ಲ; ನನ್ನ ಮದಿವೆಯಲ್ಲಿ ತಂದೆಗೆ ಮಾತನಾಡುವ ಅಧಿಕಾರವೆ? ನಿಮ್ಮಂತಹ ಹೇಡಿ ಜನರಿಗೆ ಕಲ್ಪನೆ ಕೂಡ ಬರುವಾತಿಲ್ಲ. ನನ್ನ ತಂದೆಯದೇ ಯಾಕೆ, ಎಲ್ಲರ ತಂದೆಯಾದ ದೇವರ

ಮಾತು ಕೂಡ ಧಿಕ್ಕರಿಸುವೆ ನನ್ನ ತತ್ವಕ್ಕೆ ವಿರೋಧಿಸಿದರೆ. (ಆವೇಶದಿಂದ ಹೋಗುವನು).

**ಲಲಿತಾ:—** (ಕೊಂಕಣ್ಣನಿಗೆ, ದೈನ್ಯದಿಂದ) ನಾನಾದರೂ ಏನು ಮಾಡಲಿ? ಮದಿವೆ ಮಾಡಿಸರೆ ಜೀವ ಬಿಡುವೆ ಎಂದರೆ ನಿನ್ನಕಿಂತ ಮೊದಲು ಜೀವ ಬಿಡುವೆ ಎಂದು ಹೇಳಿದರು ನನ್ನ ತಂದೆಯವರು! ಕೊಂಕ, ಶ್ರೀಧರ-ಅವರಿಗೆ ನೀನೇ ಹೇಳಬಾರದೆ? ಮದಿವೆ ಆದರೇನ್ನಾಯಿತು, ಸುಧಾರಣಾಸಂಘದಿಂದ ನಾನು ಕೆಲಸ ಮಾಡುವೆ ಎಂದು?

**ಕೊಂಕಣ್ಣ:—** ಕೆಲಸ ಮಾಡುವದೇ ಒಂದು ದೊಡ್ಡ ಸುಧಾರಣೆ ಎಂದು ನನ್ನ ಮತ. ಅದಕಾಗಿ ನೀನು ಕೆಲಸ ಮಾಡಿದರೆ ನಾನು ಸುಧಾರಿಸಿದೆ ಎಂದು ತಿಳಿಯುವೆ. ಆಯಿತೆ? (ಹೊರಡುವನು).

**ಲಲಿತಾ:—** ಆಗದಿದ್ದರೆ ಮಾತ್ರ ನೀನು ಹೇಳಿದ ಭಾವಿಯ ಹಾದಿಯನ್ನೇ ಹಿಡಿಯುವವಳು ಈ ಲಲಿತಾ---ಹೀಗೆ ಹಂಗಿಸಿಕೊಂಡು ಇರುವದಕ್ಕಿಂತ.

**ಕೊಂಕಣ್ಣ:—** ಹಂಗಿಸಿಕೊಂಡು ಇರುವದಕ್ಕಿಂತ ಇದ್ದು ಹಂಗಿಸುವದೇ ಹೆಂಗಸಿಗೆ ಇಷ್ಟ ಎಂಬುದು ನನಗೆ ಗೊತ್ತಿಲ್ಲವೆ? (ನಗುತ್ತ ಹೋಗುವನು. ಲಲಿತೆಯು ಉದ್ವಿಗ್ನಮುಖದಿಂದ ಅವನನ್ನು ನೋಡುತ್ತ ನಿಲ್ಲುವಳು.)

(ತೆರೆ)

## (ಎರಡನೆಯ ಅಂಕ ಮುಗಿದುದು)

# ಮೂರನೆಯ ಅಂಕ

## ದೃಶ್ಯ ೧

(ಮುಂಜಾವಿನ ಸಮಯ. ಜೋಯಿಸರ ಮನೆಯಲ್ಲಿಯ ಒಂದು ಕೋಣೆ. ಕಮ್ಮಾರ ಕಾಳಪ್ಪನೂ ಸೆಟ್ಟಿಗಳೂ ಮಾತನಾಡುತ್ತ ಬರುವರು.)

ಸೆಟ್ಟಿ:— (ಅತ್ತಿತ್ತ ನೋಡಿ) ಜೋಯಿಸರು ಇರುವರೊ ಇಲ್ಲವೊ ಮನೆಯೊಳಗೆ?

ಕಾಳಪ್ಪ:— (ಮೆಲುದನಿಯಲ್ಲಿ) ಸೆಟ್ಟರೆ, ನೀವು ಬೇಕಾದ್ದೇಳ್ರಿ, ಜ್ವಾಯಿಸ್ರು ಲೆಕ್ಕದ ಮ್ಯಾಲ ನನ್ನ ಯಿಶ್ವಾಸ.

ಸೆಟ್ಟಿ:— (ಉದಾಸೀನನಂತೆ) ಆಲ್ಲೋ, ಹುಚ್ಚಾ, ಲೆಕ್ಕದಿಂದ ಈ ತೊಡಕು ಬಿಡಿಸೋ ಹಾಗಿದ್ರೆ ನಾನೇ ಎಂದಿಗೊ ಬಿಡಿಸ್ತಿದ್ದೆ. (ಹೆಮ್ಮೆಯ ಮುಗುಳ್ನಗೆಯಿಂದ) ಸೆಟ್ಟಿ ಅಂದರೆ ಏನೆಂದು ತಿಳಿದಿರುವಿ? ಕೇಳಿಲ್ಲವೆ ಪುರಂದರದಾಸರು ಕೂಡ ಹಾಡಿ ಹೊಗಳಿದ್ದು ಸೆಟ್ಟಿಯನ್ನ?

ಯಾತರ ಕಟಪಟಿ? ಜಗದೊಳು। ಮೆರೆಯುವ ದೊರೆ ಸೆಟ್ಟಿ ॥ ಪ ॥

ಬುದ್ಧಿ ಇಲ್ಲದೆ ಹುಟ್ಟಿ। ಬಲು ಬಲು ದೊಡ್ಡತನ ಗಳಿಸಿಟ್ಟಿ।

ದೇವಗೆ ಸದ್ಗುಣ ಬಾಕಿ ಬಿಟ್ಟಿ। ಅವನೆ ಉದ್ದರಿ ಕೊಟ್ಟ ಸೆಟ್ಟಿ ॥ ೧ ॥

ಕಾಲದಿ ಮನೆ ಕಟ್ಟಿ। ಆದರೊಳು ಸಂಸಾರ ಮನಮುಟ್ಟಿ॥

ಮಾಡಲು ಸಾಲವ ನೀಡುವ ಪುರಂದರ– ।
ವಿಠ್ಠಲರಾಯನೆ ಜಟ್ಟಿ ॥ ೨ ॥

**ಕಾಳಪ್ಪ:—** (ಕೊಂಕು ನಗೆಯಿಂದ) ಪುರಂದರದಾಸರೂ ಚಿನಿವಾಲ ಸೆಟ್ಟಿಗಳೆ. ಸೆಟ್ಟರೆ, ನೀವು ಬೇಕಾದ್ದೇಳ್ರಿ, ನಿಮ್ಮ ಲೆಕ್ಕದ ಮೇಲ ನನ್ನ ವಿಶ್ವಾಸ ಇಲ್ಲ. ನಿಮ್ಮ ಲೆಕ್ಕಾ ಅಂದ್ರೆ ಮುಂದಿಗೆ ದುಕ್ಕ ನಿಮಗೆ ರೊಕ್ಕ.

**ಸೆಟ್ಟಿ:—** (ನಕ್ಕು) ಲೆಕ್ಕ ಸುಳ್ಳೇನೊ ಏನಾದರೂ? ಹಹಹಾ.

**ಜೋಯಿಸ:—** (ಒಮ್ಮೆಲೆ ಬಂದು) ಯಾರವರು? (ಮುಂದೆ ನೋಡಿ) ಓಹೋ, ಏನು ಸೆಟ್ಟಿಗಳೆ, ಹೊತ್ತಿಲ್ಲದ ಹೊತ್ತಿನಲ್ಲಿ ಈ ಬಡವನ್ನ ಅನುಗ್ರಹ ಮಾಡುವ ಬುದ್ಧಿ ಬಂದಿತೇಕೆ?

**ಸೆಟ್ಟಿ:—** (ವಿಷಾದದಿಂದ) ಅನುಗ್ರಹ ಎಲ್ಲಿಯದು ಜೋಯಿಸರೆ? ನಮ್ಮೆಲ್ಲರ ಗ್ರಹಗಳೇ ವಕ್ರ ಆಗಿವೆ ಎಂದು ನಿಮ್ಮ ಕಡೆಗೆ ಬಂದದ್ದು.

**ಜೋಯಿಸ:—** ಯಾಕೆ, ಕಾಳಪ್ಪಾ, ನಿನ್ನ ಮನೆಯವಳಿಗೆ ಹೇಗಿದೆ?

**ಕಾಳಪ್ಪ:—** ಆಕೆಗೆ ತಂಪರಸಾದ್ದಿಂದ ಗುಣಾ ಐತಿರಿ; ಆದ್ರೆ, ಜೋಯಿಸರೆ, ಇದೇನ ದೇಶಾದಾಗೇ ಭೂತ ಹೊಕ್ಕ ಹಾಗೆ ಇದೆ, ಇದರ ಗತಿ ಏನೂ ಅಂತ ಕೇಳೋದು.

**ಜೋಯಿಸ:—** (ತತ್ವಜ್ಞಾನಿಯಂತೆ) ಗತಿ ಏನು? ಕಾಲಚಕ್ರದಲ್ಲಿ ಸಿಲುಕಿದ ಮೇಲೆ ತಿರುಗಲೆ ಬೇಕಲ್ಲವೆ?

**ಕಾಳಪ್ಪ:—** ಇಷ್ಟೊಂದು ತಿರುಗೋ ನಿಮ್ಮ ಕಾಲಚಕ್ರಕ್ಕೆ ಒಂದು ಕಬ್ಬಿಣದ ಕುಳ ಬೇಕಾಗಿಲ್ವೆ?

ಸೆಟ್ಟಿ:— ಅದೇನು ಕಾಲಚಕ್ರವೊ? ನಮ್ಮ ಕಾಲಿನೊಳಗೆಯೆ ಒಂದು ಚಕ್ರ ಇದ್ದರೆ ಸರಿ; ಎಲ್ಲಿಯಾದರೂ ತಿರಗುತಾ ಹೋಗತಿದ್ದೆವು.

ಜೋಯಿಸ:— (ನಗುತ್ತ) ಅದೆಲ್ಲ ಸರಿ; ಕುಳಿತುಕೊಳ್ಳಿರಿ ಸೆಟ್ಟಿಗಳೆ, ಕುಳಿತುಕೊ ಕಾಳಪ್ಪಾ. (ಕೋಣೆಯ ಮಧ್ಯದಲ್ಲಿ ಸೆಟ್ಟಿಯು ಆಯಾಸದಿಂದ ಕುಳಿತುಕೊಳ್ಳುವನು. ಕೊಂಚ ದೂರದಲ್ಲಿ ಕಾಳಪ್ಪನೂ "ಕೊತು ಏಳಬೇಕಾದ್ರೆ ತಲೆಗೆ ಕೂಡ ಚಕ್ರ ಬರತೈತಿ" ಎಂದು ಗುಣುಗುಟ್ಟುತ್ತ ಕುಳಿತುಕೊಳ್ಳುವನು. ಜೋಯಿಸರು ತಾವು ಬಂದ ಬಾಗಿಲಿನ ಹತ್ತಿರದಲ್ಲಿಯೆ ಕುಳಿತುಕೊಂಡು) ಮಾಡುವದೇನು? ಮುಂದೆ ಆಗುವದನ್ನು ಹೇಳಬಲ್ಲೆವು ಇಷ್ಟೆ; ಅದನ್ನು ಸರಿಮಾಡುವವರು ಯಾರು?

ಕಾಳಪ್ಪ:— ಶಾಸ್ತ್ರದಿಂದ ಇಲ್ಲಾದ್ರೂ ನಿಂ ಬುದ್ಧಿಯಿಂದಾ ನನಗೊಂದು ಹುಂಚಿಕೆ ಹೇಳ್ತೀರಿ ಅಂತ ಆಶಾ ಕಟ್ಟಿಕೊಂಡು ಬಂದೀನಿ ನಾನು. (ವಿಷಾದದಿಂದ) ಜ್ವಾಯಿಸ್ರು, ಹೀಗಾದ್ರ ನಡೆಯೋದು ಹೇಗೆ ಅಂತ ನನ್ನ ಯಿಚಾರ. ಏನು ಒಂದು ಕಬ್ಬಿಣ ಸರಪಣಿ ಮಾಡಿ ಕಟ್ಟಿಕೊಂಡು ಬೀಳಬೇಕೆ? ಏನು ಕಮುಟಗಿ—ಒಳಗಿನ ಬೂದಿ ಬಡಕೊಂಡು ಬೈರಾಗಿ ಆಗಬೇಕೆ?

ಸೆಟ್ಟಿ:— ಏನು ಅಂಗಡಿಯೊಳಗಿನ ತೆಂಗು ನಮ್ಮ ತಲೆಗೆ ಗಟ್ಟಿಸಿಕೊಳ್ಳಬೇಕೆ?

ಜೋಯಿಸ:— (ವಿಷಾದದಿಂದ) ಸೆಟ್ಟಿಗಳೆ, ಜನರ ಬುದ್ಧಿಯೆ ಬೂದಿಯಾಗಿ ಅವರ ತಲೆ ಎಂದರೆ ತೆಂಗಿನ ಬುರುಡೆಯಾದರೆ ಮಾಡುವದೇನು? ತಮ್ಮ ಕೆಲಸ ಯಾವದು ತಮಗೆ ತಿಳಿಯಲಾರದ ಜನ ನಮ್ಮದು.

ಕಾಳಪ್ಪ:— ಮುತ್ತಿನಂಥಾ ಮಾತು ನೋಡ್ರಿ, ಜ್ವಾಯಿಸ್ರ.

ಜೋಯಿಸ:— ಈಗ್ಗೆ ನೋಡಬಾರದೆ? ನನ್ನದೆ ಒಂದು ಸಣ್ಣ ಕೆಲಸ; ಇವರ ಇಂಗ್ಲಿಶ ಹಾಳಾಗಲಿ, ಈಗಿನ ಜನ ಸಣ್ಣಸಣ್ಣ ಕೆಲಸಗಳನ್ನಾದರೂ ಮಾಡಬಾರದೆ? ಒಂದು ಸಣ್ಣ ಕೆಲಸ. ಎಂತಹ ಬಟ್ಟೆಯನ್ನೆ ಧರಿಸಲೊಲ್ಲರೇಕೆ, ಆ ಬಟ್ಟೆಯ ಕೆಳಗೆ ಹೃದಯವನ್ನಾದರೂ ಮುಡಿಯೊಳಗೆ ಇಡುವಂತಹ ಒಂದು ಯಜ್ಞೋಪವೀತ, ಅದನ್ನು ಕೂಡ ಧರಿಸಬಾರದೆ? ನಮ್ಮಂತಹರು ಇವರಿಗಾಗಿ ನಮ್ಮ ಕಯ್ಯಿಂದ ನೂತ ಯಜ್ಞೋಪವೀತವನ್ನು ಧರಿಸಿದರೆ ಎಂತಹ ದೊಡ್ಡ ಕೆಲಸ! ಹತ್ತಿಯನ್ನು ಬೆಳೆದವನಿಗೆ ಲಾಭ, ಅದನ್ನು ಹಿಂಜುವವನ ಹೊಟ್ಟೆ ತುಂಬುವದು, ಅದನ್ನು ನೂಲುವ ನಮ್ಮಂತಹ ಬಡ ಜೋಯಿಸರ ಹೊಟ್ಟೆ ತುಂಬುವದು.

ಕಾಳಪ್ಪ:— (ಸೆಟ್ಟಿಗೆ) ಸೆಟ್ಟರೆ, ಹೇಳಲಿಲ್ವೆ ಜ್ವಾಯಿಸ್ರ ಲೆಕ್ಕ ಎಂದಿಗಾದ್ರೂ ಚುರುಕೂ ಅಂತೆ?

ಜೋಯಿಸ:— ಆದರಂತೆಯೆ ದಿನಾಲು, ಕೊನೆಗೆ ಶನಿವಾರಕ್ಕೊಮ್ಮೆಯಾದರೂ, ದೇವರಿಗೆ ತೆಂಗು ಒಡೆಯಿಸುವದು. ದೇವರೇನು ಇವರ ತೆಂಗು ತಿನ್ನುವಹಾಗೆಯೆ ಮಾಡ್ತಾರೆ; ಕೊನೆಗೆ ಒಡೆದ ತೆಂಗು ತಮ್ಮದೆಯೆ, ಮನೆಯಲ್ಲಿ ಅಡಿಗೆಗೆ ಉಪಯುಕ್ತ, ಅಂಗಡಿಯಲ್ಲಿ ಸೆಟ್ಟಿಗೆ ಉಪಯುಕ್ತ. (ಉಸುರ್ಗರೆದು) ಆದರೆ ತಿಳಿಯುವದೆಲ್ಲಿ ನಮ್ಮ ಜನಕ್ಕೆ?

ಕಾಳಪ್ಪ:— ಜ್ವಾಯಿಸ್ರ, ಇದೆಲ್ಲಾ ಇದ್ದ ಮಾತು, ಆದ್ರೆ ಮುಂದೆ ಮಾಡೋದೇನೂ ಅಂತ ಯಿಚಾರ ಹಾಕಬಾರದೆ?

ಸೆಟ್ಟಿ:— ಜೋಯಿಸರೆ, ನಾನೂ ಒಂದು ಯೋಚಾರ ಮಾಡಿರುವೆ.

ಜೋಯಿಸ:— ಏನದು ?

ಸೆಟ್ಟಿ:— ನಿಮಗೆ ಈ ಇದು ಗೊತ್ತಿರಬಹುದಲ್ಲ—ಆ—ಅದು—ಅದು ಯಾವದು ?—ಆ—ಸಂಘ—ಆ ಸಾಲ ಕೊಡುವ ಸಂಘ ?

ಕಾಳಪ್ಪ:— ಅದೇ—ಆ ಕೆಂಪರೆಂಟಿ ಸಂಘ.

ಜೋಯಿಸ:— (ನಕ್ಕು) ಓಹೊ, ಕೋಪರೇಟಿವ್ ಸಂಘವೆ? ಸಹಕಾರಿ ಸಂಘ ಅನ್ನುವರಲ್ಲವೆ ಅದಕ್ಕೆ ?

ಕಾಳಪ್ಪ:— (ಸಂಶಯದಿಂದ) ಅಲ್ಲಿ ಮತ್ತೆ ಸಾಲ ತೆಗೆಯೋ ಯೋಚಾರೇನು ನಿಮ್ಮದು ?

ಸೆಟ್ಟಿ:— ಕೊಂಚ ಸಮಾಧಾನದಿಂದ ಕೇಳಿಕೊ, ಒಮ್ಮೆಲೆ ಬೆದರಬೇಡ. ಘಬ್ಬೊಬ್ಬರಾಗಿ ಗುಡ್ಡದಂತಹ ಬಡ್ಡಿಯಿಂದ ಸಾಲ ಕೊಟ್ಟರೆ ಜನರು ಆಡಿಕೊಳ್ಳುವರು ಎಂದು ಈ ಸಾಹುಕಾರರು ಹಿಂಡುಗೂಡಿ, ಒಂದು ಸಂಘ ಎಂದು ಮಾಡಿಕೊಂಡು, ಅದೇ ಬಡ್ಡಿಗೆಯೆ ಸಾಲ ಕೊಡುವರು; ಸಂಘ ಎಂದರೆ ನಾಲ್ಕುಜನರಿಗೆ ಬೇಕಾದುದು ಎಂದು ಒಂದು ಕಲ್ಪನೆ. ಅದಕಾಗಿ ನಾವು ಕೂಡ ಒಂದು ಸಂಘ ಕೂಡಿಸಬೇಕು ಎಂದು ನನ್ನ ವಿಚಾರ.

ಕಾಳಪ್ಪ:— (ನಿರಾಶೆಯಿಂದ) ಆ ಸಂಘದೊಳಗೆ ನಿಮ್ಮ ಯೋಚಾರ್ನೇ ಬಡ್ಡಿಗೆ ಹಚ್ಚೋರೇನು ?

ಸೆಟ್ಟಿ:— (ಅಸಮಾಧಾನದಿಂದ) ಕೇಳಿಕೊಳ್ಳೊ, ದಡ್ಡಾ. ಸಾಹುಕಾರರೆ ಸಂಘ ಕೂಡಿಸಬೇಕು ಅನ್ನುವ ನಿಯಮವಿಲ್ಲ.

ಸಾಲಗಾರರದೊಂದು ಸಂಘ ಯಾಕೆ ಕೂಡಿಸಬಾರದು? ಯಾಕೆ ಕೂಡಿಸಬಾರದು ಎಂದು ನನ್ನ ಪ್ರಶ್ನೆ. ಒಬ್ಬೊಬ್ಬರಾಗಿಯೆ ಸಾಲ ತೆಗೆಯುವಷ್ಟು ಪತ್ತು ನಮ್ಮಲ್ಲಿ ಉಳಿದಿಲ್ಲ; ಹತ್ತಾರು ಜನರು ಕೂಡಿ ಸಾಲ ತೆಗೆದರಾಯಿತು.

(ಹೊರಗೆ ಬಾಗಿಲ-ಸಪ್ಪಳ)

ಕಾಳಪ್ಪ:— (ಸಂಶಯದಿಂದ) ಮುಂದೆ ಅದನ್ನ ತಿರುಗಿ ಕೊಡೋದು?

ಸೆಟ್ಟಿ:— (ನಕ್ಕು) ಹುಚ್ಚಾ, ಸಾಲ ತೆಗೆಯುವಾಗ್ಗೆ ಸಾಲ ತಿರುಗಿ ಕೊಡುವ ವಿಚಾರ ಮಾಡುವದು ವ್ಯವಹಾರ ಜ್ಞಾನವಲ್ಲ. ಕಚ್ಚಾ ಮಾತಲ್ಲ ಇದು ಮತ್ತೆ.

ಜೋಯಿಸ:— (ತಲೆತೂಗುತ್ತ) ಇದು ಸರಿಯಾದುದು; ಇದನ್ನು ಕೈಕೊಳ್ಳಲಿಕ್ಕೆ ಯಾವ ಅಡ್ಡಿಯೂ ಇಲ್ಲ. ಆದರೆ ನಾನೂ ಒಂದು ತಾತ್ಪೂರ್ತಿಕ ಹಂಚಿಕೆ ಹಾಕಿರುವೆ.

ಕಾಳಪ್ಪ:— ಹೇಳ್ರಿ, ಹೇಳ್ರಿ ಜ್ವಾಯಿಸ್ರು, ನಿಮ್ಮ ಹಂಚಿಕೆ ಅಂದ್ರೆ ಕಾದ ಕಬ್ಬಿಣದ ಹಂಚಿನ ಹಾಗೆ.

ಜೋಯಿಸ:— ಆದರೂ ಕೇವಲ ತಾತ್ಪೂರ್ತಿಕವಾದ ಹಂಚಿಕೆ. ನಮ್ಮ ರಾಯರ ಮಗ ಶ್ರೀಧರ ಇದ್ದಾನೆ. ಆತನದು ಇನ್ನೂ ಮದಿವೆ ಆಗಿಲ್ಲ. ರಾಯರ ಕಡೆಗೆ ಹೋಗುವೆ, ಏನಾದರೂ ಹಂಚಿಕೆ ಹಾಕಿ ಈ ಸಲ ಮದಿವೆ ಮಾಡುವಹಾಗೆ ಏರ್ಪಾಟು ಮಾಡುವೆ. ಅದೊಂದು ಕೆಲಸವಾದರೆ ತಾತ್ಪೂರ್ತಿಕವಾಗಿ ಎಷ್ಟೋ ಆಧಾರವಾಗುವದು.

ಸೆಟ್ಟಿ:— (ನಿರಾಶೆಯಿಂದ) ಅಯ್ಯೋ, ರಾಯರನ್ನು ಒಲಿಸುವದೆಂದರೆ ಅದೇನೊ ಕಮ್ಮಾರ ಕಾಳಪ್ಪನಿಗೆಯೆ ಶಕ್ಯ; ಕಬ್ಬಿಣ ಮಣಿಸುವ ರೂಢಿಯಿದೆ ಅವನಿಗೆ.

ಜೋಯಿಸ:— (ಹೆಮ್ಮೆಯಿಂದ) ಅದೇಕೆ? ಈಗಾಗಲೆ ಒಮ್ಮೆ ತಿಳುಹಿಸಿರುವೆ ಅವರಿಗೆ; ಒಪ್ಪುವ ಲಕ್ಷಣ ಮಾತ್ರ ಮುಂದೆ ಕಾಣ ಬಂದುವು.

ಕಾಳಪ್ಪ — ಒಮ್ಮೆ ಹೇಳಿದರೆ ಮಾಡುವ ಜನ ಅದು? ಮನಸಿನೊಳಗ ಇರಲಿ ಬಿಡಲಿ ಆ ಮಾತು ಬೇರೆ, ಆದರೆ ಮುಪ್ಪಿನೊಳಗ ರಾಯರಿಗ ಬಂದ ಮಾತು ಉಳಿಯೋದಿಲ್ಲ ನೆನಪಿನೊಳಗ. ಹೇಳ್ಬೇಕ್ಹೇಳ್ಬೇಕು, ಹೇಳೇಹೇಳ್ಬೇಕು.

ಸೆಟ್ಟಿ:— ಅದೇನು ಸುಳ್ಳಲ್ಲ. ರಾಯರ ಮರೆಯುವದೆಂದರೆ ಅದೊಂದು ಗಾದೆಯ ಮಾತು ಆಗಿಹೋಗಿದೆ. "ಆ" ಎಂದು ಆಕಳಿಕೆ ಬಂದರೆ ಮರೆತು "ಛಟ್" ಎಂದು ನೀತುಬಿಡುವವರು ರಾಯರು.

(ಜೋಯಿಸರು ಖೊಳ್ಳೆಂದು ನಗುವರು, ಸೆಟ್ಟಿಯು ಹೊಟ್ಟೆಹಿಡಿದುಕೊಳ್ಳುವನು; ಇಷ್ಟರಲ್ಲಿ "ಜೋಯಿಸರು ಇದ್ದಾರೆಯೆ" ಎಂದು ಕೊಂಕಣ್ಣನು ಬರುವನು.)

ಜೋಯಿಸ:— (ನಗೆಯಿಂದ) ಇದ್ದಾರೆ, ಇದ್ದಾರೆ; ಇನ್ನೂ ನಾಲ್ಕು ದಿನ ಇರುವ ಹಂಚಿಕೆ ಹಾಕತಾ ಇದ್ದಾರೆ.

ಕೊಂಕಣ್ಣ:— (ಅವರೆಲ್ಲರೂ ನಗುವದನ್ನು ನೋಡಿ) ಹೀಗೆ ನೀವು ಉಲ್ಲಾಸದಿಂದ ಕಾಲ ಕಳೆಯುತ್ತಾ ನಡೆದರೆ ನಾಲ್ಕು ದಿನ ಯಾಕೆ, ನಾಲ್ಕು ಯುಗಗಳವರೆಗೆ ನಡೆಯಬಹುದು ಜೋಯಿಸರ ಆಯುಷ್ಯ.

ಜೋಯಿಸ:— ಕೊಂಕಣ್ಣಾ, ಕುಳಿತುಕೊ. ನಿನ್ನ ಭವಿಷ್ಯ ಸರಿಯಾಗ ಬಹುದಿತ್ತು; ಆದರೆ ನೀನು ಹಾಕಿದ ಕುಂಡಲಿ ತಪ್ಪಾದುದು. (ಕೊಂಕಣ್ಣನು ಜೋಯಿಸರ ಬಲಬದಿಗೆ ಕೊಂಚ ದೂರ

ದಲ್ಲಿ ಕುಳಿತುಕೊಳ್ಳುವನು). ಕೊಂಕಣ್ಣಾ, ಉಲ್ಲಾಸವೆಲ್ಲಿ ಯದಣ್ಣಾ ! ಹೊಟ್ಟೆಯೊಳಗಿನ ಕಿಚ್ಚಿನಿಂದ ಉಸಿರುಬಿಡುವದು, ಅದು ನಗೆಯಲ್ಲ.

**ಕಾಳಪ್ಪ**:— ನೀವು ಕಲಿತವರು; ನಿಮ್ಮ ಸುಖದ ದಿನಾ ಒಂದಿವೆ; ನಮಗೆಲ್ಲಿಯ ಸುಖ?

**ಸೆಟ್ಟಿ**:— ನೋಡಿರಿ ಕೊಂಕಣ್ಣಾ, ದುಡ್ಡಿಲ್ಲದೆ ಇನ್ನೆಷ್ಟು ದಿವಸ ಪೇಚಾಡಬೇಕು ಎಂದು ನಮ್ಮ ಗೋಳು. ನೀವು ನಾಲ್ಕುಕಡೆ ಓದಿದವರು; ಈ ಸುಖದ ಬರಗಾಲ ಎಂದು ಹೋಗುವದು ಹೇಳಬಾರದೆ?

**ಕೊಂಕಣ್ಣ**:— ಇದು ಸುಖದ ಬರಗಾಲವಲ್ಲ, ಬುದ್ಧಿಯ ಬರಗಾಲ; ಎಲ್ಲರ ಬುದ್ಧಿಗೂ ಏನೂ ತಿಳಿಯದಂತಹ ಬೆರಗಾಗುವ ಕಾಲ ಒಂದಿದೆ.

**ಕಾಳಪ್ಪ**:— ಅದೆಲ್ಲಾ ಸರಿ, ಆದರೆ ಸಮಾಧಾನ ಒಂದು ಬೇಕಲ್ಲರಿ ಬುದ್ಧಿಗೆ?

**ಕೊಂಕಣ್ಣ**:— ಸಮಾಧಾನಕ್ಕೇನು ಕೊರತೆ? ಯಾರು ಕಲಿಯುಗ ಬಂದಿತು ಅಂತಾರೆ; ಕಲಿತ ಜನ ಅದನ್ನೆ world depression ಅಂದರೆ ಕೆಟ್ಟಕಾಲ ಎಂದು ಸಮಾಧಾನ ಕಾಣತಾರೆ.

**ಸೆಟ್ಟಿ**:— ಅಂತಹಾ ಸಮಾಧಾನ ಬೇಕಿಲ್ಲ ನಮಗೆ. ಇದನ್ನು ನೀಗುವದು ಹೇಗೆ ಎಂದು ನಮ್ಮ ದೊಡ್ಡ ತೊಡಕು.

**ಜೋಯಿಸ**:— ನಿನಗೇನಾದರೂ ಒಂದು ಉಪಾಯ ಗೊತ್ತಿದೆಯೆ ಹೇಗೆ ಎಂದು ಅವರು ಕೇಳುವ ಪ್ರಶ್ನೆ.

**ಕೊಂಕಣ್ಣ**:-- (ನಿರಾಶೆಯಿಂದ) ನನಗೆ ಗೊತ್ತಿದೆ ಉಪಾಯ; ಆದರೆ ಅದನ್ನು ಈ ದಿವಸದೊಳಗೆ ಕೇಳುವವರಾರು?

**ಕಾಳಪ್ಪ**:— ನಮ್ಮ ಪಿತರ ಮಾತು ಇದ್ದರೆ ಕೇಳಲೇಬೇಕು, ಬಿಟ್ಟೀತು ಹೇಗೆ?

**ಕೊಂಕಣ್ಣ**:— (ಗಂಭೀರವಾಗಿ) ನಮ್ಮ ದೇಶದ, ನಮ್ಮ ಸಮಾಜದ ಈ ದುರದೃಷ್ಟವನ್ನು ಹೋಗಲಾಡಿಸಲಿಕ್ಕೆ ಒಂದೇ ಉಪಾಯ. ಯಾವ ಸಾಧನದಿಂದ ಭಾರತದೇಶವು ಸುವರ್ಣಭೂಮಿಯಾಗಿತ್ತೋ, ಆ ಸಾಧನವನ್ನು ಮತ್ತೆ ಕೈಕೊಳ್ಳುವದು; ಅಂದರೆ ಸನಾತನವೈದಿಕಧರ್ಮದ ಪುನರುತ್ಥಾಪನೆಯನ್ನು ಮಾಡುವದು.

**ಜೋಯಿಸ**:— (ಆನಂದದಿಂದ) ಕೊಂಕಣ್ಣಾ, ಕೊಂಕಣ್ಣಾ, ಎಂತಹಾ ಮುತ್ತಿನಂತಹ ಮಾತು ಹೇಳಿದೆ! ನಾನಾದರೂ ಅದೇ ಹಂಚಿಕೆಯನ್ನು ಯೋಚಿಸಿದ್ದೆ; ಆದರೆ ನಿಮ್ಮಂತಹ ಕಲಿತವರು ಅದಕ್ಕೆ ಹುಚ್ಚರಂತೆ ವಿರೋಧಿಸುವರು ಎಂಬ ಭಯವಿದ್ದಿತು ನನಗೆ.

**ಕಾಳಪ್ಪ**:— (ಸಂಶಯದಿಂದ) ಅದರಿಂದ ಹೊಟ್ಟೆ ತುಂಬೋದೆ?-ಯಾವದೇನು, ಹೊಟ್ಟೆ ತುಂಬೋದಾದ್ರೆ ಸಾಕು.

**ಕೊಂಕಣ್ಣ**:— (ಕನಿಕರದಿಂದ) ಹೊಟ್ಟೆ ತುಂಬುವದೆ? ಇಹದಲ್ಲಿ ಹೊಟ್ಟೆ ತುಂಬುವದು, ಪರದಲ್ಲಿ ಸ್ವರ್ಗ ಸಿಕ್ಕುವದು.

**ಸೆಟ್ಟಿ**:— ಇನ್ನಿಷ್ಟು ಹೆಚ್ಚಾಗಿ ತಿಳುಹಿಸಿ ಹೇಳಬೇಕು ಎಂದು—

**ಜೋಯಿಸ**:— ಅಹುದು ನನ್ನದೂ ಅಭಿಪ್ರಾಯ ಹಾಗೆಯೆ.

**ಕೊಂಕಣ್ಣ**:— ನನಗೆ ತುಂಬಾ ಆನಂದವಿದೆ, ಅಭಿಮಾನವಿದೆ.—ಆದರೆ ನಿಮಗೆ ಬೇಜಾರವಾಗಲಿಕ್ಕಿಲ್ಲವಷ್ಟೆ?

ಕಾಳಪ್ಪ:— ಛೆ, ಛೆ, ಎಂತಹ ಮಾತು! ನಂ ಸುಖದ ಸಂಗತಿ ನಮಗ ಬೇಜಾರ ಆಗೋದೆ?

ಕೊಂಕಣ್ಣ:— ನೀವೇ ಬಂಟರಾದ ಮೇಲೆ ನಿರುಪಾಯವಾಗಿ ಹೇಳಲೇ ಬೇಕಲ್ಲವೆ? ನಮ್ಮ ದುರದೃಷ್ಟ ಹೋಗಲಾಡಿಸಬೇಕಾದರೆ ಸನಾತನ ವೈದಿಕಧರ್ಮದ ಪುನರುಜ್ಜೀವನೆ ಮಾಡಬೇಕೆಂದು ಹೇಳಿದೆನಲ್ಲವೆ? ಅದಕ್ಕೆ ಕಾರಣಗಳುಂಟು.- (ನಕ್ಕು) ಕುಳಿತುಕೊಂಡರೆ ಲೆಕ್ಚರು (lecture) ಕೊಡುವ ಆವೇಶ ಬರುವದಿಲ್ಲ, ಆದುದರಿಂದ ನಾನು ನಿಂತುಕೊಂಡೆಯೆ ಮಾತನಾಡುವೆ. (ಎದ್ದು ನಿಲ್ಲುವನು).

ಜೋಯಿಸ:— ಲೆಕ್ಚರು ಅಂದ ಮೇಲೆ ನಾವಾದರೂ ಏಳಬೇಕಾಗುವದು.

ಕೊಂಕಣ್ಣ:— ನೀವು ಕುಳಿತುಕೊಳ್ಳಿ—

ಜೋಯಿಸ:— ಲೆಕ್ಚರು ಅಂದರೆ ನಿಂತುಕೊಂಡು ಕೇಳುವ ರೂಢಿಯೆ ಬಿದ್ದಿದೆ ನಮಗೆ.

ಸೆಟ್ಟಿ:— (ಕೊಂಕಣ್ಣನಿಗೆ) ನಾನೂ ಎದ್ದು ನಿಲ್ಲುವೆ; ಕೆಲವು ಕಾರಣಗಳಿಂದ ನನಗೆ ಕೊಂಚ ತಡವಾಗಬಹುದು ಏಳಲಿಕ್ಕೆ, ನೀವು ಪ್ರಾರಂಭಮಾಡಬಹುದು. (ಜೋಯಿಸನೂ ಕಾಳಪ್ಪನೂ ಎದ್ದು ನಿಲ್ಲುವರು).

ಕೊಂಕಣ್ಣ:— ಈಗಿನ ನಮ್ಮ ದುಃಸ್ಥಿತಿಗೆ ವೈದಿಕಧರ್ಮ ಮಾಯವಾದದ್ದೆ ಕಾರಣ; ವೈದಿಕಧರ್ಮ ಎಂದರೆ ಆನಂದದಿಂದ ಅಭಿಮಾನದಿಂದ ಯಾವನಿಗೆ ರೋಮಾಂಚ ಏಳಲಿಕ್ಕಿಲ್ಲ? (ಸೆಟ್ಟಿಯು ಆಯಾಸದಿಂದ ಎದ್ದು ನಿಲ್ಲುವನು). ವೈದಿಕಧರ್ಮ

ಎಂದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳಂತೆ ಉತ್ತಮ ಸಾಧನಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ರೆಂಬ ನಾಲ್ಕು ಜಾತಿಗಳು. ಬ್ರಹ್ಮನ ನಾಲ್ಕು ಮುಖ ಗಳಂತೆ ಸಮಾಜಕ್ಕೆ ನಾಲ್ಕು ವರ್ಣಗಳು. ಆದರೇನು? ನಾಲ್ಕು ವರ್ಣಗಳೂ ಹೋದುವು, ಆ ನಾಲ್ಕು ಕರ್ಮ ಗಳೂ ಹೋದುವು. ಸದ್ಯಕ್ಕೆ ಬ್ರಾಹ್ಮಣರೆನ್ನುವವರು ತಮ್ಮ ಪರಂಪರಾಗತ ಕರ್ಮ ಬಿಟ್ಟುಕೊಟ್ಟು ವ್ಯಾಪ ಸಾಯ, ಉದ್ಯೋಗ, ರಾಜಸೇವೆಯಲ್ಲಿ ಸೇರಿಬಿಟ್ಟರು. ಸಮಾಜದ ಒಂದು ಆಧಾರಸ್ತಂಭವೆ ಸೊಟ್ಟು ಬಿದ್ದಂ ತಾಯಿತು. ಆದಕಾಗಿ ಮುಂಚೆ ಅಲ್ಲಲ್ಲಿ ಆಯಾರೀತಿ ಯಿಂದ ಹೊಟ್ಟೆತುಂಬಿಕೊಳ್ಳುವ ಬ್ರಾಹ್ಮಣರನ್ನು ಒಟ್ಟು ಗೂಡಿಸಿ ಒಂದು ಯಜ್ಞದ ಕಟ್ಟೆಗೆ ಕಟ್ಟಿ ಹಾಕಬೇಕು.

**ಕಾಳಪ್ಪ:—** ಭಲೆ, ತಂತಂ ಜಾತಿಯ ಕೆಲಸ ಬಿಟ್ಟು ಎರಡನೆಯ ಜಾತಿಯ ಕೆಲಸದಾಗ ಕೈ ಹಾಕಿದರಲ್ಲ! ಇದು ತಿಳಿದಿ ದ್ದಿಲ್ಲ ಬಿಡು ನನಗೆ.

**ಜೋಯಿಸ:—** (ಅಸಮಾಧಾನದಿಂದ) ಇದು ಸರಿಯಾದ ಮಾತೊ, ಕೊಂಕಣ್ಣಾ?

**ಕೊಂಕಣ್ಣ:—** (ಲಕ್ಷ್ಯವಿಲ್ಲದೆ) ಅದರಂತೆಯೆ ಕ್ಷತ್ರಿಯರೂ ಹಾಳಾಗಿ ಹೋದರು. ಕಯ್ಯೊಳಗೆ ಬಾಣ-ಬತ್ತಳಿಕೆ ಹಿಡಿದು ವರ್ಷಕ್ಕೊಮ್ಮೆಯಾದರೂ ಜನರನ್ನು ಕೊಂದು ಚಲ್ಲುವ ವೀರ ಕ್ಷತ್ರಿಯರೆಲ್ಲಿದ್ದಾರೆ ಈಗ್ಗೆ? ಅದಕಾಗಿಯೆ ಸಾಗು ವಳಿ ಮಾಡದ ಹೊಲದೊಳಗೆ ಕಸಕಡ್ಡಿ ಬೆಳೆದ ಹಾಗೆ ಜನರ ಸಂಖ್ಯೆ ಬೆಳೆದುಬಿಟ್ಟಿದೆ ನಮ್ಮ ದೇಶದೊಳಗೆ.

**ಸೆಟ್ಟಿ**:— ಎಲ್ಲೆಲ್ಲಿಯದೊ ರೋಗ–ಪಿಡುಗು ಸಾಕಾಗಲಿಲ್ಲವೇ ಸಪಾ ನಿನಗೆ?

**ಕೊಂಕಣ್ಣ**:— (ಗಂಭೀರವಾಗಿ) ಆದರೆ ರೋಗ–ಪಿಡುಗುಗಳು ಕ್ಷತ್ರಿಯ ವಂಶದಲ್ಲಿ ಹುಟ್ಟಿದುವು ಅಲ್ಲ; ಕ್ಷತ್ರಿಯ ರಾಜರಂತೆ ಅವುಗಳಿಗೆ ವಂಶಪರಂಪರಾಗತ ಆಳಿಕೆ ಇಲ್ಲ.

**ಜೋಯಿಸ**:— (ನಗೆಯಿಂದ) ತಿಳಿಯಿತು, ತಿಳಿಯಿತು; ಕೊಂಕಣ್ಣಾ ಎಂದಿನಂತೆ ವಿನೋದ ನಡೆಯಿಸಿರುವ. ಹಹಹ.

**ಕಾಳಪ್ಪ**:— ಆದರೂ ಅವರು ಹೇಳಿದ್ದ ರೋಗ ಏನೊ ಉಕ್ಕ ಐತಿ ಅಂತೆ—

**ಕೊಂಕಣ್ಣ**:— ಕಾಳಪ್ಪಾ, ನಿನ್ನಿಂದ ಉಕ್ಕಿಬರುವ ಕಳಕಳಿಯಿಂದ ನನಗೆ ಎಷ್ಟೋ ಧೈರ್ಯ ಬಂದಿತು. ನಿನ್ನ ವ್ಯವಸಾಯಕ್ಕೆ ಎಷ್ಟು ಮಾನವಿದ್ದಿತು ಹಿಂದಿನ ಕಾಲದಲ್ಲಿ ಗೊತ್ತಿದೆಯೆ ನಿನಗೆ? ಮಾತುಮಾತಿಗೊಮ್ಮೆ, ಮಾಡಿದ ತಪ್ಪಿಗೊಮ್ಮೆ ಕಾದ ಕಬ್ಬಿಣದ ಬರೆ ಕೊಡಿಸುತ್ತಿದ್ದರು; ಕಮ್ಮಾರರ ವೈಭವ ಆಗ್ಗೆ ಎಷ್ಟೆಂದು ಹೇಳಲಿ!

**ಜೋಯಿಸ**:— (ಸಿಟ್ಟಿನ ಸೋಗಿನಿಂದ) ಕೊಂಕಣ್ಣಾ, ಸಾಕುಮಾಡು ನಿನ್ನ ವಿನೋದ. ಕಲಿತವ ಎಂದು ಮರ್ಯಾದೆಯಿಂದ ಕೇಳಿದರೆ—

**ಕೊಂಕಣ್ಣ**:— ಜೋಯಿಸರೆ, ನಾನು ಹೇಳುವದಕ್ಕಾದರೂ ಕೊಂಚ ಮರ್ಯಾದೆ ತೋರಿಸಿರಿ, ಆ ಮೇಲೆ ಮಾತನಾಡಿರಿ. ನಾನು ಹೇಳುವದು ನಿಜವಲ್ಲವೆ? ನಮ್ಮ ಸನಾತನ ಧರ್ಮದಲ್ಲಿ ಹುಡುಗೆಗೆ ಎಂಟು ವರ್ಷಗಳು ತುಂಬಿದ

ಕೂಡಲೆ ಮದಿವೆ ಮಾಡಬೇಕೆಂಬುವದೊಂದು ಆಗ್ರಹ ಏದ್ದಿತು. ಒಂದು ಮದಿವೆ ಎಂದರೆ ಎಷ್ಟು ಜನಗಳದು ಹೊಟ್ಟೆ ತುಂಬುವದು? ಈಗೇಸಿದೆ? ಮದಿವೆ ಮುಂದೆ ನೂಕುವದು; ಅದಕ್ಕೂ ಕೂಡ ವೆಚ್ಚಮಾಡಬಾರದೆಂಬುವದೊಂದು ಸುಧಾರಣೆಯಂತೆ! (ಸೆಟ್ಟಿಯು ಖೊಳ್ಳೆಂದು ನಗುವನು, ನಗೆ ತಡೆಯದಂತಾಗಿ ಹೊಟ್ಟೆ ಬಡಿಯುವನು). ಯಾಕೆ, ಸೆಟ್ಟಿಗಳೆ, ನಾನು ಹೇಳಿದ ಮಾತು ನಿಮಗಾದರೂ ಒಪ್ಪಿಗೆ ಆಯಿತಲ್ಲವೆ?

**ಸೆಟ್ಟಿ:—** (ಆಯಾಸದಿಂದ ನಗೆ ತಡೆದು) ಅಯ್ಯೋ, ಅಯ್ಯೋ, ಮಹಾರಾಯಾ, ನಿನ್ನ ಬುದ್ಧಿ ನನಗಿದ್ದರೆ ನನ್ನನ್ನು ಕೂಡ ಯಾರಾದರೂ ಉದ್ಧರಿ ಕೊಂಡು ಕೊಂಡರೆ ಕೈಜೀಸುತ್ತ ತಿರುಗಾಡುತ್ತಿದ್ದೆ. ಅಯ್ಯೋ! ನಿನ್ನಂತಹಾ ಮಾತನಾಡುವವನನ್ನು ಎಲ್ಲಿಯೂ ನೋಡಲಿಲ್ಲ!

**ಕೊಂಕಣ್ಣ:—** ಈಗಿನ ಶಿಕ್ಷಣವೆ ಹಾಗಿದೆ; ಕಲಿತಿದ್ದರೆ ನೀವೂ ನನ್ನ ಹಾಗೆಯೆ ಮಾತನಾಡುತ್ತಿದ್ದಿರಿ.

**ಕಾಳಪ್ಪ:—** (ಒಮ್ಮೆಲೆ ನಕ್ಕು) ಹಹ! ಇದರ ಮುಂದ ಹಂಚಿಕೆಯ ಇಲ್ಲ. ಹೀಗ ಸುಖಾ ಹಚ್ಚಿಕೊಂಡರೆ ಬೆಂಕಿ ಇಲ್ಲದೆ ಕರಗಿಸಬಹುದು ಕಬ್ಬಿಣ!

**ಸೆಟ್ಟಿ:—** ನಡೆ, ಕಾಳಪ್ಪಾ, ಬಂದುದಕ್ಕೆ ಕೆಟ್ಟೇನು ಆಗಲಿಲ್ಲ.

**ಕಾಳಪ್ಪ:—** ಕೆಟ್ಟು! ಇನ್ನೆಂಟು ದಿವಸ ಊಟದ ಕಾಳಜಿ ಇಲ್ಲ; ನೆನಪ ಮಾಡಿಕೊಂಡು ಮಾಡಿಕೊಂಡು, ನಕ್ಕನಕ್ಕು ಮನೇಅವರ ಹೊಟ್ಟೆ ಕೂಡಾ ತುಂಬಸ್ತೇನಿ.

(ಸೆಟ್ಟಿಯೂ ಕಾಳಪ್ಪನೂ ಉಲ್ಲಾಸದಿಂದ ಹೋಗುವರು)

ಜೋಯಿಸ:— (ನಿರಾಶೆಯಿಂದ ತಲೆ ಅಲ್ಲಾಡಿಸಿ) ಕೊಂಕಣ್ಣಾ, ನಿನಗೆ ಸರಿಯಾಗಿ ಮಾತನಾಡುವ ಬುದ್ಧಿ ಎಂದು ಬರುವದೊ?

ಕೊಂಕಣ್ಣ:— ಬುದ್ಧಿಯ ಮಾತು ಬುದ್ಧಿಯ ಚರ್ಚೆ ನಡೆದಲ್ಲಿ. ಈಗ್ಗೆ ನನ್ನದೊಂದು ಮಾತು ನಡೆಯಿಸಬೇಕು.

ಜೋಯಿಸ:— ಈ ಮೊದಲೇ ಹೇಳಿದ್ದೇ ಅಲ್ಲವೆ? ಶ್ರೀಧರನ ಮದಿವೆಯ ಮಾತು? (ಕೊಂಕಣ್ಣನು ತಲೆತೂಗುವನು). ಅಯ್ಯೋ! ಅದು ಭವಿಷ್ಯ; ಎಂದಿಗೊ ಆಗಿಹೋಗಿದೆ; ಆಗಲೇಬೇಕೆಂದು ರಾಯರಿಗೆ ಆವಾಗಲೆ ಹೇಳಿಬಿಟ್ಟಿರುವೆ.

ಕೊಂಕಣ್ಣ:— (ಕೈಮುಗಿದು) ಈ ತಮ್ಮ ಉಪಕಾರಕ್ಕಾಗಿ ಕೊಂಕಣ್ಣನು ಈ ಕ್ಷಣದಲ್ಲಿ ನಿಮ್ಮ ಸಹಕಾರಿ ಸಾಲಗಾರರ ಸಂಘದ ಸಭಾಸದನಾಗುವನು. ಪ್ರವೇಶದ ಫೀ (ಹಣ) ಎಂದು ತನ್ನ ಎಲ್ಲ ಸಾಲದ ಜವಾಬ್ದಾರಿಯನ್ನು ನಿಮಗೆ ಕೊಡುವನು.

ಜೋಯಿಸ:— (ನಕ್ಕು) ಸಾಲದುದಕ್ಕೆ ನೀನೊಬ್ಬನೆ ಸಭಾಸದನಾಗುವದು ಉಳಿದಿದೆ. ನಡೆ.

(ಇಬ್ಬರೂ ಹೋಗುವರು)



# ದೃಶ್ಯ ೨

(ಮಧ್ಯಾಹ್ನದ ನಾಲ್ಕು ಗಂಟೆಯ ಸಮಯ. "ರಾಯರ" ಮನೆಯಲ್ಲಿಯ ಒಂದು ಕೋಣೆ. ರಾಯರು ಕೈಯ್ಯಲ್ಲಿಯ ಒಂದು ಕಾಗದವನ್ನು ಓದುತ್ತಾ ಇತ್ತಿಂದತ್ತ ತಿರುಗಾಡುತ್ತಿರುವರು. ಹೆಜ್ಜೆಗಳ ನಾದವನ್ನು ನೋಡಿದರೆ ರಾಯರು ಆವುದೋ ಒಂದು ಸಿಟ್ಟಿನಿಂದ ಕುದಿಯುತ್ತಿರಬಹುದೆಂದು ಊಹೆಯಾಗುವಂತಿದೆ; ಇಷ್ಟರಲ್ಲಿ "ಬಾಯಿ"ರು ಬರುವರು. "ಬಾಯಿರು" ಅಂದರೆ ರಾಯರು ಆವುದೋ ಒಂದು ಕಾರಣದಿಂದ ತಮ್ಮ ಹೆಂಡತಿಗೆ ಇಟ್ಟ ಹೆಸರು. ಬಾಯಿರು ಪತಿಯ ರಭಸವನ್ನು ನೋಡಿ ತಡೆದು ನೋಡುತ್ತಲೆ ನಿಲ್ಲುವರು. ಇಷ್ಟರಲ್ಲಿ ರಾಯರು ಅವರನ್ನು ನೋಡಿ "ಹುಂ" ಎಂದು ಸಿಟ್ಟಿನಿಂದಲೆ ಉಸಿರ್ಗರೆಯುವರು. ಇವರ ಸಿಟ್ಟನ್ನು ಹೋಗಲಾಡಿಸುವ ಹವಣಿಕೆಯಿಂದ—)

"ಬಾಯಿ"ರು: (ಮುಗುಳ್ನಗೆಯಿಂದ) ಅದೇನು? ಹೆಣ್ಣಿನೋರ ಕಡೆಯಿಂದ ಕಾಗದ ಬಂದಿದೆಯೆ?

ರಾಯರು:— (ಸಿಟ್ಟಿನಿಂದ) ಅಲ್ಲ, ಗಂಡಿನವರ ಕಡೆಯಿಂದ.

"ಬಾಯಿ"ರು:—(ಅಣಕಿನಿಂದ) ಹೊಟ್ಟೆಗೆ ಹುಟ್ಟಿದ ಹೆಣ್ಮಗು ಇಲ್ಲಾ ಅಂತೆ ನೆಟ್ಟಗಿದೆ; ಇದ್ದರೆ ಕಾಣ್ತಿದ್ದಿರಿ ಆ ಸುಖವನ್ನೂ.— ಗಂಡು—ಮಗುವಿನ ಮದಿವೆಗೆ ಗತಿ ಇಲ್ಲ ಇದುವರೆಗೆ!

ರಾಯರು:— ನಿನ್ನ ಹೇಳಿಕೆಯು ಗತಿಯನ್ನು ಹಿಡಿದರೆ ಅಧೋಗತಿಯನ್ನೆ ಕಾಣುವದೆ.—ಏನು ಹೆಣ್ಣೊ, ಏನು ಗಂಡೊ!— ನಮಗಂತೂ ಇದ್ದ ಒಂದು ಹುಡುಗ ಹುಡುಗೆಯಕಿಂತ ಹೆಚ್ಚು ಭಾರವಾಗಿದಾನೆ.

"ಬಾಯಿ"ರು:—ಅಂತಹಾದೇನು ಮಾಡಿದೆಯೊ ಕೂಸು! ಬರಾಬರಾ ತನ್ನ ಪರೀಕ್ಷೆ ಎಲ್ಲ ಮೇಲೆಮೇಲೆ ಬಂದು ಮುಗಿಸಿದ ನಲ್ಲ. ಮಿಕ್ಕವರ ಹುಡುಗರ ಹಾಗೆ ಇದ್ದರೆ—

ರಾಯರು:— (ಸಿಟ್ಟಿನಿಂದ) ಇದ್ದರೆ—ಇದ್ದರೆ. ನಿನಗೆ "ಬಾಯಿ"ರು ಅಂತೆ ಹೆಸರಿಟ್ಟದ್ದು ಅದಕ್ಕಾಗಿಯೆ. ಬಾಯಿ ಇದೆ ಎನ್ನೋದೊಂದು ಕಾರಣಕ್ಕಾಗಿಯೆ ಮಾತು ಕೊಚ್ಚುವಿ. ಮಿಕ್ಕವರ ಹುಡುಗರ ಹಾಗೆ ಅಂತೆ! ಈ ಲುಚ್ಚಾ ಹಾಳು ಮಾಡಿದಷ್ಟು ರೊಕ್ಕದಿಂದ ಹತ್ತು ಹೆಣ್ಣು ಮಕ್ಕಳ ವರದಕ್ಷಿಣೆ ಸಾಗಿಸಬಹುದಾಗಿತ್ತು! (ಕಾಗದ ವನ್ನು ತೋರಿಸುತ್ತ) ನೋಡಿದೆಯಾ ಇದನ್ನು? ಪರೀಕ್ಷೆ ಮುಗಿಸಿಕೊಂಡು ಹೆಚ್ಚಿನ ಪೇಚಾಟದಲ್ಲಿ ಹಾಕಿಬಿಟ್ಟ ನನ್ನನ್ನು! ತಾನು ಬಂದು ಮನೆ ಸೇರಿಕೊಂಡ; ಈಗ ಅರಿವೆಯ ಅಂಗಡಿಯ ಉದ್ರಿ, ಚಹಾದ ಅಂಗಡಿಯ ಉದ್ರಿ, ತಂಬಾಕಿನ ಉದ್ರಿ—ಛೆ, ಕಳಿಸಿದ ದುಡ್ಡೆಲ್ಲ ಹೊಗೆಸೊಪ್ಪು ಮಾಡಿ ಉಫ್ ಎಂದು ಬಿಟ್ಟ ಈ ಅಪ ಲಕ್ಷಣ ಹುಡುಗ!

"ಬಾಯಿ"ರು:—ಅಂತಹಾದೇನು ಆಪತ್ತು ಬಂದಿತೊ ಇವರಿಗೆ? ಏನು ಮನೆಯೊಳಗೆ ೮-೧೦ ಮಕ್ಕಳಿವೆಯೆ ಹಾಳು ಮಾಡ ಲಿಕ್ಕೆ? ಏನು ಹಿತ್ತಲದಲ್ಲಿ ಬಂಗಾರದ ಗಿಡ ಹಚ್ಚಿದೆಯೆ ಕಡಿದು ಹಾಕಲಿಕ್ಕೆ?—ಇಂದಿಲ್ಲ ನಾಳೆಯಾದರೂ ತನ್ನ ದೆಯೆ ಎಲ್ಲ.

ರಾಯರು:— (ತಿರಸ್ಕಾರದಿಂದ) ಇಂದಿನದೆಲ್ಲ ಮುಂದಿಗೆಯೆ ಹೋಗು ವದು; ಹೀಗೆಯೆ ನಡೆದರೆ ನಾಳಿಗಾಗಿ ಒಂದು ಕಾಸು ಉಳಿಯಲಿಕ್ಕಿಲ್ಲ.

"ಬಾಯಿ"ರು:—ಇಲ್ಲವಾದರೆ ಇಲ್ಲ. ಅವನಿಗೇನು ದೇವರು ಕಡಿಮೆ ಬುದ್ಧಿ ಕೊಟ್ಟಿಲ್ಲ; ಬೇಕಾದಷ್ಟು ಗಳಿಸುವ.

ರಾಯರು:— (ಅಣಕಿಸಿಂದ) ಓಹೊ! ಗಳಿಸದೆ ಏನು! ಮಂಗನೂರ ಮಂತ್ರಿಯ ಪದವಿಯೆ ಸಿಕ್ಕುವದು ಇವನಿಗೆ!

"ಬಾಯಿ"ರು:—ಹಡೆದವರು ತಮ್ಮ ಮಗನ ವಿಷಯವಾಗಿ ಕಾಳಜಿ ಮಾಡಿದರೆ ಸಿಕ್ಕಲಿಕ್ಕಿಲ್ಲವೆ ಮಂತ್ರಿಯ ಪದವಿ?

ರಾಯರು:— ಆಗಲಿ, ಮತ್ತೆ ಎಲ್ಲ ದೋಷ ನನ್ನ ಮೇಲೆಯೆ.—ಕಾಳಜಿ ಮಾಡುವದೇ ಈ ತುಂಟನ ವಿಷಯವಾಗಿ! "ಸದ್ಯಕ್ಕೆ ಕೆಲಸ ಸಿಕ್ಕದಿದ್ದರೆ ಇಲ್ಲ, ಮದಿವೆ ಮಾಡಿಕೊಳ್ಳೊ, ಇಷ್ಟರಲ್ಲಿ ವರದಕ್ಷಿಣೆಯಾದರೂ ಏನಿಲ್ಲ-ಏನಾದರೂ ದೊರೆಯಬಹುದು, ಮುಂದೆ ಅದೂ ಸಿಕ್ಕಲಿಕ್ಕಿಲ್ಲ" ಅಂದರೆ, "ಮದಿವೆ ಮಾಡಿಕೊಳ್ಳುವದು ಮೂರ್ಖತನ, ವರದಕ್ಷಿಣೆ ಮೋಸತನ" ಎಂದು ಹರಟೆ ಕೊಚ್ಚತಾನಲ್ಲ ತುಂಟ!

"ಬಾಯಿ"ರು:—ಬೆಳೆದ ಹುಡುಗ; ಕೇಳಿದ ಕೂಡಲೆ ಮದಿವೆ ಆಗುವೆ ಎಂದು ಬಾಯಿಬಿಚ್ಚಿ ಹೇಳ್ತಾನೆಯೆ? ನಾನು ಹೇಳುವೆ. ಅವರು ಯಾರೊ ಬಂದಿರುವರಂತಲ್ಲ, ಹುಡುಗೆಯನ್ನು ತೋರಿಸಲಿ ಶ್ರೀಧರನಿಗೆ.

ರಾಯರು:— (ಅಸಮಾಧಾನದಿಂದ) ಹುಚ್ಚಿ ಇರುವೆ ನೀನು; ಹುಡುಗೆಯನ್ನು ತೋರಿಸಿದರೆ ಮತ್ತೆ ಮೈಮೇಲೆಯೆ ಪ್ರಸಂಗ.

"ಬಾಯಿ"ರು:—ಏನಾದರೊಂದು ಹೇಳಬೇಡಿ; ಶಿಷ್ಟಾಚಾರದಂತೆ ಆಗಲೇಬೇಕು ಎಲ್ಲ.

ರಾಯರು:— ಆ ಶಿಷ್ಟಾಚಾರ ಇನ್ನು ಮೇಲೆ ಅಡಿಗೆಯ ಒಲೆಗೆ ಉಪಯೋಗ. ಈಗ್ಗೆ ಮನಬಂದಂತೆ ಬೆಳೆದ ಹುಡುಗರು;

ಒಬ್ಬರೊಬ್ಬರನ್ನು ಬೆಟ್ಟಿ ಮಾಡಿಸಿದರೆ ಆಗಿ ಹೋಯಿತು, ನಾವೂ ನೀವೂ ಮಾಡುವದೆ ಉಳಿಯುವದಿಲ್ಲ

"ಬಾಯಿ"ರು: -(ನಾಚಿಕೆಯಿಂದಲೂ ಅಣಕಿಸಿಂದಲೂ) ಇವರ ಮನೆಯೊಳಗೆಯೆ ನಡೆದು ಒಂದಿಲ್ಲ ಈ ಶಿಷ್ಟಾಚಾರ.

ರಾಯರು:— ಏನೆ, ಎಂತಹ ಹುಚ್ಚಿ ನೀನು! ಹುಡುಗರನ್ನು ಒಬ್ಬರೊಬ್ಬರನ್ನು ತೋರಿಸಿ ಮದಿವೆ ಮಾಡುವದಿದ್ದರೆ ಈ ಜಗತ್ತಿನೊಳಗೆ ಇಷ್ಟೊಂದು ಮದಿವೆಗಳೆ ಆಗುತ್ತಿರಲಿಲ್ಲ. ಅದಕಾಗಿಯೆ ನಮ್ಮಲ್ಲಿ ಒಬ್ಬರೊಬ್ಬರನ್ನು ತೋರಿಸುವ ರೂಢಿಯೆ ಇದ್ದಿಲ್ಲ; ಮಂಟಪದಲ್ಲಿ ಕೂಡ ವಿವಾಹ ವಿಧಿ ಮುಗಿಯುವವರೆಗೆ ಒಬ್ಬರೊಬ್ಬರನ್ನು ನೋಡಿಯಾರು ಎಂದು ನಡುವೆ ಅಂತಃಪಟ ಹಿಡಿಯುವ ರೂಢಿಯಿದೆ.— (ನಗೆಯಿಂದ) ಹಾಗೆ ಕಣ್ಣುತುಂಬ ನೋಡಿ ಮದಿವೆ ಮಾಡಿಕೊಳ್ಳುವ ರೂಢಿಯಿದ್ದರೆ ನಾನೆಲ್ಲ ಹೀಗೆ (ಅವಳನ್ನು ಕೊಂಕನೋಟದಿಂದ ನೋಡುತ್ತ) ಮೋಸಹೋಗುತ್ತಿದ್ದೆ ?

"ಬಾಯಿ"ರು:—(ಸಿಟ್ಟಿನ ನೋಗಿನಿಂದ) ತಾವು ಮೋಸಹೋದದ್ದಾಯಿತು; ಮಗನಿಗಾದರೂ ರಂಭಾ-ಊರ್ವಶಿ ಸಿಕ್ಕಲಿ.

ರಾಯರು:— ಅದೆಲ್ಲ ಸರಿ; ಆದರೆ ಅವನಿಗೆ ತಿಳಿಯಬೇಕಲ್ಲ ಅಷ್ಟೊಂದು ತನ್ನ ಹಿತ!

"ಬಾಯಿ"ರು:—ನಮ್ಮ ಶ್ರೀಧರ ಸಣ್ಣಾತನಲ್ಲ; ತನ್ನದು ತಾ ನೋಡಿಕೊಳ್ಳಲಿ. ತಮಗಾದರೂ ಇಷ್ಟು ಯಾಕೆ ಹಟ?

ರಾಯರು:— (ಆಶ್ಚರ್ಯ ತೋರಿಸಿ) ಹಟ ಯಾಕೆ ಎನ್ನುವೆಯಾ? ಅದೇನೊ ನಿನ್ನ ಮಗನ ನಡಾವಳಿಯನ್ನು ನೋಡು, ಆ ಮೇಲೆ

ತಿಳಿಯುವದು ನಾನು ಇಷ್ಟು ಯಾಕೆ ಹಟ ಹಿಡಿಯುವೆ ನೆಂಬುದು ?

"ಬಾಯಿ"ರು:—ನೋಡುವಂತಹಾದೇನಿಲ್ಲ ನನ್ನ ಹುಡುಗನ ನಡಾವಳಿ ಯೊಳಗೆ. ಗುಣ ಎಂದರೆ ಹಣೆಯ ಮೇಲೆ ಬರೆದಿಟ್ಟ ಹಾಗೆ.

ರಾಯರು:— (ಸಿಟ್ಟಿನಿಂದ) ನಿಮ್ಮ ಮುಂದೆ ನಮ್ಮ ಹಣೆ ಗಟ್ಟಿಸಿದ ಹಾಗೆಯೆ. ಅವರದು ಅದೇನು ಕ್ಲಬ್ಬೊ ಮಬ್ಬೊ—ಅಲ್ಲಿ ಏನು ಮಾಡುವನು ನೋಡಿದೆಯೆಂದರೆ—

"ಬಾಯಿ"ರು:—(ನಡುವೆಯೆ) ಏನೂ ನೋಡಬೇಕಾಗಿಲ್ಲ, ನಾಲ್ಕುಜನ ಬೆಳೆದ ಗಂಡ ಹುಡುಗರ ಹಾಗೆಯೆ ಇದ್ದಿರಬೇಕು.

ರಾಯರು:— (ಹಟದಿಂದ) ನಾವೇನು ಹಾಗೆ ಇದ್ದಿಲ್ಲ ಆ ವಯಸ್ಸಿನೊ ಳಗೆ.

"ಬಾಯಿ"ರು:—ಯಾರಿಗೆ ಗೊತ್ತು, ಗಂಡಸರೆಲ್ಲ ಮದಿವೆಯ ಮುಂಚೆ ಹ್ಯಾಗೆ ಇರೋರೆಂಬುದು ?

ರಾಯರು:— (ಸಿಟ್ಟಿನಿಂದ) ಏನೆ, ನಿನ್ನ ಮಗನಲ್ಲಿ ಇಷ್ಟೊಂದು ನಿನ್ನ ವಿಶ್ವಾಸವಿದ್ದರೆ ಇದ್ದುಬಿಡಿ ನೀವಿಬ್ಬರೆ; ಹೋಗಿಬಿಡುವೆ ನಾನು ಹರಿಶ್ಚಂದ್ರನ ಹಾಗೆ ಕಾಡಿಗೆ.

"ಬಾಯಿ"ರು:—(ಮುಗುಳ್ನಗೆಯಿಂದ) ಮುಂದಿನ ಮಾತು ಮುಂದೆ; ಸದ್ಯಕ್ಕೆ ಈಗ್ಗೆ ಯಾರೋ ಬರುವವರು ಎಂದು ಹೇಳಿದಿರಲ್ಲ, ಆ ಕಾಡಿನ ದೋತರ ಬಿಟ್ಟು ಹರಿಶ್ಚಂದ್ರರಾಜಾ ಆಗಿರಿ ಅಲ್ಲಿಯ ವರೆಗೆ.

ರಾಯರು:— (ಅಸಮಾಧಾನದಿಂದ) ಮನೆಯೊಳಗೆ ಇದ್ದುದು ಒಂದೇ ಗಟ್ಟಿ ದೋತರ; ಅದನ್ನು ಕಲಿತು ಸುಧಾರಿಸಿದ ನಿನ್ನ

ಮಗ ಉಟ್ಟುಬಿಟ್ಟಿದ್ದಾನೆ. (ಮುಂದೆ ನೋಡಿ) ಅದೊ, ಎಲ್ಲಿಯೊ ಹೊರಟನು ನೋಡು ಯುವರಾಜ! ಹೇಳಿ ನೋಡು ನೀನೇ ಅವನಿಗೆ, ಈ ಹೊತ್ತು ಮದಿವೆಯ ಮಾತನಾಡಲಿಕ್ಕೆ ಯಾರೊ ಬರುವವರು ಇದ್ದಾರೆಂದು. (ಶ್ರೀಧರನು ಹೊರಗೆ ಹೋಗುವ ಸಿದ್ಧತೆಯಿಂದ ಬರುವನು. ಅತ್ತಿತ್ತ ಏನನ್ನೊ ಹುಡುಕಿದಂತೆ ಮಾಡಿ ಹೊರಡುವಷ್ಟರಲ್ಲಿ)

''ಬಾಯಿ''ರು:—ಶ್ರೀಧರಾ, ಎಲ್ಲಿಗೆ ಹೊರಟೆ?

ಶ್ರೀಧರ:— (ಉದಾಸೀನನಂತೆ) ಹೋಗುವೆ ಕ್ಲಬ್ಬಿಗೆ.

''ಬಾಯಿ''ರು:—ಹೋಗುವೆಯಂತೆ ಆ ಮೇಲೆ. (ಮುಗುಳ್ನಗೆಯಿಂದ) ಈ ಹೊತ್ತು ಹೆಣ್ಣುಕೊಡುವವರು ಯಾರೊ ಬರುವರಂತೆ–

ಶ್ರೀಧರ:— (ಮಾತನಾಡದೆಯೆ ಹೊರಡುವನು).

ರಾಯರು:— (ಸಿಟ್ಟಿನಿಂದ) ನೋಡಿದೆಯಾ? ನಮ್ಮಮೇಲೆ ಎಚ್ಚರವಾದರೂ ಇದೆಯೊ ಇಲ್ಲವೊ?—ಏನೊ, ಕೇಳಿದೆಯೇನು ಅವಳು ಹೇಳುವದನ್ನು?

ಶ್ರೀಧರ:— (ತಿರುಗಿ ನಿಂತು) ಕೇಳಿದೆ; ನನ್ನ ಸಲುವಾಗಿ ನೀವಿಷ್ಟು ತ್ರಾಸ ತೆಗೆದುಕೊಳ್ಳುವದಕ್ಕಾಗಿ ಆಭಾರಿಯಿರುವೆ. (ಹೊರಡುವನು).

ರಾಯರು:— (ಕೋಪಾತಿಶಯದಿಂದ) ಮೂರ್ಖಾ-(ಶ್ರೀಧರನು ಮತ್ತೆ ತಿರುಗಿ ನಿಲ್ಲುವನು.) ನಿನ್ನ ಕ್ಲಬ್ಬಿನ ಸಭೆಯೊಳಗೆ ಮಾತನಾಡುವೆ ಯೆಂದು ತಿಳಿದಿರುವೆಯೇನೊ? (ಗಟ್ಟಿಯಾಗಿ) ಮದಿವೆ ನಿನ್ನದು.

ಶ್ರೀಧರ:— (ಸಮಾಧಾನವನ್ನು ತೋರಿಸಬೇಕೆಂದು) ಆತುರತೆ ನಿಮಗೇಕೆ ಇಷ್ಟು?

ರಾಯರು:— ಮಗನ ಮದಿವೆಗೆ ಆತುರನಾಗದೆ ಮುಂದಿಯ ಮದಿವೆಗೆ ಆತುರನಾಗಲಿಕ್ಕೆ ನಿನ್ನ ತಂದೆ ವೈದಿಕಬ್ರಾಹ್ಮಣ ಎಂದು ತಿಳಿದಿರುವಿಯೇನೊ?

ಶ್ರೀಧರ:— (ಮೇಲಿನಂತೆ) ನನಗೆ ಗೊತ್ತಿಲ್ಲ.

ರಾಯರು:— ತಂದೆ ಏನಿದ್ದಾನೆಂಬುದು ಗೊತ್ತಿಲ್ಲವೆ ನಿನಗೆ! ನಿನ್ನಂತಹಾ ಮಗನನ್ನು ಹಡೆದದ್ದೆ ತಪ್ಪಾಯಿತಲ್ಲವೆ?

ಶ್ರೀಧರ:— ಆದದ್ದಾಗಿಹೋಯಿತು, ತಪ್ಪಿಗೆ ತಪ್ಪು ಯಾಕೆ ಕೂಡಿಸಬೇಕು?

''ಬಾಯೀ''ರು:—ಹೀಗೇಕೆ ಮಾತನಾಡುವೆಯೊ? ನಿನಗೆ ಕೇಳದೆ ಮಾಡಬಾರದೆಂದು ಅವರ ಮನಸ್ಸಿನಲ್ಲಿದೆ.

ಶ್ರೀಧರ:— (ಬೇಜಾರದಿಂದ) ಯಾರ ಮನಸ್ಸು ನನಗೇನು ಮಾಡುವದಮ್ಮಾ! ನನಗೇನು ತಿಳಿಯುವದಿಲ್ಲವೆ?

ರಾಯರು:— (ಅಣಕಿನಿಂದ) ಓಹೊ, ತಿಳಿಯುವದಲ್ಲವೆ ನಿನಗೆ! ಬೆಳೆದ ಮೇಲೆ ಸ್ವತಂತ್ರ ನೀನೆಂದು ತಿಳಿಯುವದಲ್ಲವೆ ನಿನಗೆ! ಮದಿವೆಗೆ ಮಾತ್ರವೆ ಸ್ವತಂತ್ರನಲ್ಲವೆ ನೀನು! ಬೆಳೆದ ಮೇಲೆ ಮನೆಯೊಳಗೆ ಬಿದ್ದುಕೊಳ್ಳಲು ಸ್ವತಂತ್ರನಲ್ಲವೆ ನೀನು!

''ಬಾಯೀ''ರು:—ಸಾಕು, ಸುಮ್ಮಸುಮ್ಮನೆ ಸಿಟ್ಟಿನಿಂದ ಏನಾದರೊಂದು ಮಾತನಾಡಬೇಡಿ.———ಶ್ರೀಧರಾ, ನನ್ನಾಣೆಯಾಗಿದೆ ನಿನಗೆ, ಶ್ರೀಧರಾ—

ಶ್ರೀಧರ:— ನನಗೆ ಬೇಡ, ಬೇಡ, ಈ ಮದಿವೆಯೆ ಬೇಡ. (ಎಂದು ಹೋಗುವನು).

ರಾಯರು:— ಎಲಾ, ನೀಚಾ—(ಇಷ್ಟರಲ್ಲಿ ಲಲಿತೆಯ ತಂದೆಯು ಬಂದುದನ್ನು ನೋಡಿ ಒಮ್ಮೆಲೆ ನಮಸ್ಕಾರ ಮಾಡಿ ಆದಷ್ಟು ಸಮಾಧಾನದಿಂದ) ಬರಬೇಕು, ಬರಬೇಕು, ತಮ್ಮ ದಾರಿಯನ್ನೆ ನೋಡುತಾ ಇದ್ದೆ. (ಸುಳ್ಳುನಗೆಯಿಂದ) ಸಾಲಗಾರನೊಬ್ಬ ಸುಳ್ಳು ನೆವ ಹೇಳಿಹೋದ, ಅವನ ಮೇಲೆ ಕೋಪ ಮಾಡುತಾ ಇದ್ದೆ, ಕುಳಿತುಕೊಳ್ಳಿ. (ಇಬ್ಬರೂ ಕುಳಿತುಕೊಳ್ಳುವರು; "ಬಾಯಿ"ರು ಹೋಗುವರು) ತಮ್ಮ ಕಾಗದ ತಲುಪಿತು, ಸಂಬಂಧಕ್ಕೆ ನಮ್ಮ ಒಪ್ಪಿಗೆ ಇದೆ, ಇದನ್ನು ಆದಷ್ಟು ಬೇಗ ನೆರವೇರಿಸುವದು ತಮ್ಮ ಭಾರ.

ತಂದೆ:— (ಸಂಶಯದೃಷ್ಟಿಯಿಂದ) ಅತಿಶಯ ಆನಂದ, ನಿಮ್ಮ ಹುಡುಗನಾದರೂ ಒಪ್ಪಿರಬಹುದು.

ರಾಯರು:— (ಉದ್ವಮಾದೊಂದು ಉಸಿರು ಎಳೆದು) ದೇವರ ದಯೆಯಿಂದ ಹೇಳಿದಂತೆ ಕೇಳುವನು ನಮ್ಮ ಮಗನು.

ತಂದೆ:— (ಉಸುರ್ಗರೆದು) ತಾವೇ ಭಾಗ್ಯಶಾಲಿಗಳು.

(ತೆರೆ)

## (ಮೂರನೆಯ ಅಂಕ ಮುಗಿದುದು)



# ನಾಲ್ಕನೆಯ ಅಂಕ

(ಹೂಬಿಸಿಲಿನ ಸಮಯ. ಮೊನ್ನೆ ಮುಂಜಾವಿನಲ್ಲಿ ನೋಡಿದ ಉದ್ಯಾನವಿದು. ಮುಂಜಾವಿನ ಉದ್ಯಾನಶೋಭೆ ಬೇರೆ, ಸಂಜೆಯ ಉದ್ಯಾನಶೋಭೆ ಬೇರೆ ಎಂದು ನಾವು ಹೇಳಿದುದರ ಸಾಕ್ಷ್ಯವನ್ನು ಈಗ್ಗೆ ಕೊಡಬಹುದಾಗಿದೆ. ಆದರೇನು ? ನಮಗೆ ವೇಳೆ ಯಿಲ್ಲ. ಪ್ರೇಕ್ಷಕರಲ್ಲಿ ಯಾರಿಗಾದರೂ ನೋಡುವ ಕುತೂಹಲವಿದ್ದರೆ ಅವರು— ಇದೊ, ಈ ಮಂಟಪದಿಂದ ಕಾಣುವದಲ್ಲ—ಆ ಹಾದಿಯಿಂದ ಮುಂದೆ ಹೋಗ ಬಹುದು. ಹಣವನ್ನು ಕೂಡಿಸುವದು ಸುಲಭವಲ್ಲೆಂದು ಆ ಜೋಲುಮೋರೆಯ ಮುದುಕನಿಂದ, ಎರಡನೆಯವರು ಗಳಿಸಿಟ್ಟ ಹಣವನ್ನು ಉಪಯೋಗಿಸುವದು ಸ್ವರ್ಗ ಸುಖವೆಂದು ಸ್ವರ್ಗದ ಅಪ್ಸರೆಯರಂತೆ ಕಾಣುವ ಈ ಮುಗುಳ್ನಗೆಯ ತರುಣಿಯರಿಂದ ಕಾಣಬಹುದು. ಏನೇನು ಕಾಣುವದೊ ಇನ್ನೂ ! ಸ್ವರ್ಗದಲ್ಲಿಯ ದೇವ ಬಲ್ಲನೊ, ನರಕಮೊಡೆಯನಾದ ಯಮ ಬಲ್ಲನೊ !—ಸದ್ಯಕ್ಕೆ ನಮಗೆ ಶ್ರೀಧರನ ಬೆನ್ನು ಹಿಡಿಯು ಬೇಕಾಗಿದೆ. ಯಾಕೆಂದು ಕೇಳಲು ಕೂಡ ಇದು ಸಮಯವಲ್ಲ. ನೋಡಿದಿರಾ, ಉಗ್ರ ಮತ್ತು ಉದ್ವಿಗ್ನ ಮುಖದಿಂದ ಹೇಗೆ ಬರುತ್ತಿರುವ! ಬೆದರಿದವನಂತೆ ಸುತ್ತಲೂ ನೋಡುವದರಿಂದ ಏನಾದರೊಂದು ಅವನಿಗೆ ಅನಿಷ್ಟಕಲ್ಪನೆ ಇರಬಹುದಲ್ಲವೆ ? ಅರೆ ! ಏನನ್ನೊ ನುಡಿಯುತ್ತಿರುವ.)

ಶ್ರೀಧರ.— ಹಾಳು—ನಮ್ಮ ಬಾಳು ಎಲ್ಲ ಹಾಳು.—ದೇಹದಿಂ ದೇನೊ ಬಲಿತೆ, ಬುದ್ಧಿಯಿಂದ ಕೊಳೆತೆ. ಗುಡ್ಡದಂತಹ ಮಾತನಾಡಿ ಹೆಡ್ಡನಾದೆನಲ್ಲ ಕೊನೆಗೆ! ಇಷ್ಟು ಧೈರ್ಯ ವಿಲ್ಲವೆ ನನ್ನಲ್ಲಿ? —ಮನಸ್ಸು ಹೇಡಿಯೊ, ದೇಹ ಹೇಡಿಯೊ? —ಇಲ್ಲವೆ ಮನಸ್ಸು, ದೇಹ ಕೂಡಿದರೆ ಹೇಡಿತನ ಹುಟ್ಟುವದೊ?—ಏನೆ ಆಗಲಿ, ಇಂದು ಈ ಮನಸ್ಸಿನ ಮತ್ತು ಈ ದೇಹದ ಸಂಯೋಗವನ್ನು ಮುರಿದೊಗೆಯಬೇಕಾಗಿದೆ. ಮುಂದಿನ ಜನ್ಮದಲ್ಲಿ— (ಕನಿಕರದಿಂದ, ಕೊಂಚ ಕೋಪದಿಂದ) ಅಯ್ಯೊ, ಮುಂದಿನ

ಜನ್ಮ ಹಾಳಾಗಲಿ. ಇಂದಿನ ಜನ್ಮದಲ್ಲಿ ಏನು ಮಾಡಿರುವೆ ಎಂದು ಮುಂದಿನ ಜನ್ಮ ಬೇಡಿಕೊಂಬೆ? ಸಮಾಜ ಸುಧಾರಕಸಂಘವನ್ನೇನೊ ಸುರು ಮಾಡಿದೆ, ಅದರ ಕಾರ್ಯದರ್ಶಿ ಕೂಡ ನಾನೇ ಆದೆ.-ದರ್ಶನ ಮಾಡುತಾ ಮಾಡುತಾ ಕಾರ್ಯ ಮಾಡುವದು ಮಾತ್ರ ಉಳಿದು ಬಿಟ್ಟಿತು. ಹಿಂದುಳಿದು ನಾವು ಹಿಂದು ಎಂಬುವದು ಮಾತ್ರ ಸಾರ್ಥಕವಾಯಿತು. —ಬೇಡ, ಬೇಡ, ಇಷ್ಟೊಂದು ಜನ್ಮ ಬೇಡಿಕೊಂಬುವ ಬುದ್ಧಿಗಿಂತ ಬುದ್ಧಿಯುದೆ ಒಂದು ಜನ್ಮ ಬೇಡಿಕೊಂಬೆ.—ಆಡಿದಂತೆ ಮಾಡುವ ಬಂಟನಾಗಲಿಕ್ಕೆ ಇದೇ ಯೋಗ.—ಲಲಿತೆಗೆ ಇಲ್ಲಿಯೆ ಬರುವಂತೆ ಹೇಳಿರುವೆ. —ಮಾಡಲಿಯೇನು ನಾನಾದರೂ?—ಇದ್ದು ಹೇಡಿಯಾಗುವದಕ್ಕಿಂತ ಸತ್ತು ಶೂರನಾಗುವದು ಒಳಿತಲ್ಲವೆ? ಸ್ನೇಹಲತಾ ಸತ್ತು ಹೆಂಗಸರು ಶೂರ ಎನ್ನುವ ಕಲ್ಪನೆ ಬಂದಿತು; ಶ್ರೀಧರನು ಸತ್ತು ಗಂಡಸರು ಕೂಡ ಶೂರರೆಂದು ಮನವರಿಕೆಯಾಗಲಿ ನಮ್ಮ ಸಮಾಜಕ್ಕೆ. (ಮುಂದೆ ನೋಡಿ ಬೆದರಿದವನಂತೆ) ಅದೊ, ಲಲಿತೆ ಬಂದಳು ಮುಖವನ್ನು ತೋರಿಸಲಿ ಹೇಗೆ ಅವಳಿಗೆ? (ಲಲಿತೆಯು ಬರುವಳು; ಶ್ರೀಧರನು ಬೇಟೆಯ ಹುಲಿಯ ಆವೇಶದಿಂದ ಒಮ್ಮೆಲೆ "ಲಲಿತಾ" ಎಂದು ಅವಳ ಕೈ ಹಿಡಿಯುವನು.)

ಲಲಿತಾ:— (ಬೆದರಿ) ಇದೇನು, ಇದೇನು?

ಶ್ರೀಧರ:— (ಹತಾಶನಂತೆ) ಇದು ಶ್ರೀಧರನ ಕೊನೆಯು ಪ್ರಣಾಮ. ಲಲಿತಾ, ನಿನಗೆ ಹೇಡಿಯೆಂದೆನಲ್ಲವೆ ನಾನು? ನಿನ್ನಂತಹ ಪ್ರಸಂಗ ಬಂದರೆ ದೇವರನ್ನು ಕೂಡ ಧಿಕ್ಕರಿಸುವೆ ಎಂದೆ

ನಲ್ಲವೆ? ಆ ದೇವ ಸಿಟ್ಟಾದನೇನೊ ನನ್ನ ಮೇಲೆ? (ಗದ್ಗದನಾಗಿ) ಲಲಿತಾ, ಲಲಿತಾ, ಇನ್ನು ಹೇಳುವೆ ನಿನ್ನ ಬಿಟ್ಟು ಯಾರದೂ ಕೈಹಿಡಿಯಬಾರದೆಂದು ನಿಶ್ಚಯ ಮಾಡಿದ್ದೆ; ನಿಶ್ಚಯ ಮಾಡಿದ ತಪ್ಪಿಗಾಗಿ ಹಿಡಿದ ಕಯ್ಯನ್ನೆ ಬಿಡಬೇಕಾಗಿದೆ....ಎಲ್ಲಿಯದೊ ಒಂದು ಸಿಡಿಲು ಬಡಿದು ಪ್ರಾಣಕ್ಕೆ ಎರವಾಗಬೇಕಾಗಿದೆ.

ಲಲಿತಾ:— (ಕಣ್ಣೀರು ತಂದು) ಈ ಲಲಿತೆಯ ಸ್ಥಿತಿ ತಿಳಿದಿದ್ದರೆ ನೀವೇನು ಮಾಡುತ್ತಿದ್ದಿರೊ? ಈ ಲಲಿತೆಗೆ ಜೀವ ಕನಸಾಯ್ತು, ಈ ಲಲಿತೆಗೆ ಹೃದಯವೆಂದರೆ ಹುದುಗಿಸಿಟ್ಟ ಹಾವಾಯ್ತು. ಹರಿದಾಡುವ ರಕ್ತ ವಿಷವಾಯ್ತು. ನೀವೇ ನನಗೆ ಗತಿ ಎಂದು—

ಶ್ರೀಧರ:— (ಕಳಕಳಿಯಿಂದ) ಲಲಿತಾ, ಲಲಿತಾ, ನನಗೆ ಗೊತ್ತಿಲ್ಲವೆ ನಮ್ಮಿಬ್ಬರ ಪರಸ್ಪರ ಪ್ರೇಮ? ಆದರೇನು? ಈ ಹಾಳು ಸಮಾಜ, ಈ ಕೀಳು ರೂಢಿ! ಸಾಕಾಯಿತಪ್ಪಾ ಜೀವನ! (ಕಣ್ಣೀರು ತಂದು) ಲಲಿತಾ, ಲಲಿತಾ, ಈ ನಶ್ವರಜಗತ್ತಿನಲ್ಲಿ ಶಾಶ್ವತಪ್ರೇಮಕ್ಕೆ ಆಶ್ರಯವಿಲ್ಲ. (ಆವೇಶದಿಂದ) ನಡೆ. ಬೂದಿಯಂತೆ ಮುಚ್ಚಿಕೊಂಡ ಈ ದೇಹ ಉದುರಿಸಿ, ಕಿಡಿಯಂತಿರುವ ನಮ್ಮ ಪ್ರೇಮದಲ್ಲಿ ಸುಖದ ಯಜ್ಞ ಮಾಡಿ ಸ್ವರ್ಗ ಸೇರುವಾ, ಸಂತೋಷದಿಂದ ಸೇರುವಾ.

ಲಲಿತಾ:— (ದುಃಖದ ನಗೆಯಿಂದ) ನನ್ನದಾದರೂ ಅದೇ ವಿಚಾರ ಇದ್ದಿತು; ಆದರೆ ಹೆಂಗಸಿನ ಹೇಡಿತನ ಎಂದು—

ಶ್ರೀಧರ:— (ಆಶ್ಚರ್ಯ ತೋರಿಸಿ) ಹೇಡಿತನ! ಲಲಿತಾ, ಈ ಹುಚ್ಚು

ಯಾರು ಹಾಕಿದರು ನಿನ್ನ ತಲೆಯೊಳಗೆ? ತತ್ವಕ್ಕಾಗಿ ಸಾಯುವದು ಹೇಡಿತನವೆ? ಇದ್ದು ಕೊಳೆಯುವದಕ್ಕಿಂತ ಸತ್ತು ಬೆಳೆಯುವದು ಹೇಡಿತನವೆ? ಎಲ್ಲವನ್ನೂ ಬಿಟ್ಟುಕೊಡುವ ಸನ್ಯಾಸ ಶ್ರೇಷ್ಠವೆಂದರೆ—ಎಲ್ಲಕ್ಕೂ ಮಿಗಿಲಾದ ಜೀವವನ್ನೆ ಬಿಟ್ಟುಕೊಡುವದೆಂದರೆ **ಶ್ರೇಷ್ಠತಮವಾದ** ಸನ್ಯಾಸವಲ್ಲವೆ?

ಲಲಿತಾ — (ಅವನ ಕೈಗಳನ್ನು ಗಟ್ಟಿಯಾಗಿ ಹಿಡಿದು) ಹಾಗಾದರೆ ವಿಲಂಬ ಯಾಕೆ? ಬೇಡಾದದ್ದು ಮಾಡುವ ಕೇಡು ನಿಮಗೆ ಒದಗಿದೆ; ಬೇಕಾದುದ ಬಿಡುವ ಕೇಡು ನನಗೆ ಒದಗಿದೆ. ಯಾಕೆ? ವಿಲಂಬ ಯಾಕೆ?

ಶ್ರೀಧರ: — (ಕೊಂಚ ಬೆದರಿ, ಅದನ್ನು ತೋರಿಸಬಾರದೆಂಬ ಹವಣಿಕೆಯಿಂದ) ವಿಲಂಬ! ವಿಲಂಬವೆಲ್ಲಿಯದು? ಮಾಡುವ ಕೆಲಸ ಮುಗಿದ ಮೇಲೆ, ಮಾಡುವ ಶಕ್ತಿ ಮೀರಿದ ಮೇಲೆ, ತೊಳಲಾಡುವ ತರುಣ ನಾನಲ್ಲ.— (ಅಧೈರ್ಯವನ್ನು ನುಂಗುತ್ತ) ಕೊಂಚ ಕೆಲಸ ಉಳಿದಿದೆ; ಅದನ್ನಿಷ್ಟು ಮುಗಿಸಿ ಈ ಯಾತ್ರೆಯಿಂದ ನಮ್ಮ ಮನೆಗೆ ಹೋಗುವಾ.

ಲಲಿತಾ: — (ಸಂಶಯದಿಂದ) ಉಳಿದಿದೆ! ಇನ್ನೇನು ಉಳಿದಿದೆ? (ಕಣ್ಣೀರು ತಂದು) ಇನ್ನುಳಿದದ್ದು ನಮ್ಮ ಮನಸ್ಸು ಕಲ್ಲು ಮಾಡಿ-

ಶ್ರೀಧರ — (ಆತುರತೆಯಿಂದ) ಮನಸ್ಸು ಎಂದಿಗೊ ಕಲ್ಲಾಗಿದೆ. ಆ ಕಲ್ಲಿಗೆ ಅಪ್ಪಳಿಸಿ ಸಿಡಿದು ಬೀಳಬೇಕು ನಮ್ಮ ಸಮಾಜದ ರೂಢಿ ಎಂದಲ್ಲವೆ ನಾವು ಸಂಘವನ್ನು ಸುರುವು ಮಾಡಿದ್ದು? ನಾವು ಹೋದರೂ ತಪಸ್ಸು ಮಾಡಿ

ತಿರುಗಿ ಬರುವವರೆಗೆ ನಮ್ಮ ಸಂಘ ಉಳಿಯಬೇಕಲ್ಲವೆ? —ಆಗಲಿ, ಅದಕಾಗಿ ಮೊದಲು ಸಂಘದೊಂದು ಸಭೆ ಕೂಡಿಸುವಾ. ಇಂತಹ ರೂಢಿಗೆ ತರುಣರು ಹೇಗೆ ಹಾಳಾಗುವರೆಂಬುದರ ಉದಾಹರಣೆಗಾಗಿ ನಾವಿಬ್ಬರೂ ಈ ಲೋಕಯಾತ್ರೆಯನ್ನು ಮುಗಿಸಿದೆವು ಎಂದು ಒಂದು unanimous resolution ಪಾಸು ಮಾಡುವಾ.— ಆ ಮೇಲೆ ಅರ್ಜುನನ ಕೂಡ ಕಾದಲಿಚ್ಛಿಸುವ ಸುಧನ್ವನಂತೆ ಸರ್ವಸಿದ್ಧತೆಯಿಂದ—

ಲಲಿತಾ:— (ಸಂಶಯದಿಂದಲೆ) ಆದರೆ—ಆದರೆ—ಆಷ್ಟೊಂದರ ವರೆಗೆ ಜನರು ಆಡಿಕೊಳ್ಳುವರು ಎಂಬ ಹೆದರಿಕೆ ನನಗೆ.

ಶ್ರೀಧರ:— (ವೀರಾವೇಶದಿಂದ) ಹೆದರಬೇಡ, ಬೆದರಬೇಡ; ಸ್ವರ್ಗಕ್ಕೆ ಹೋದರೂ ನನ್ನ ಸಹಾಯ ತಪ್ಪಲಿಕ್ಕಿಲ್ಲ ನಿನಗೆ.

("ಸ್ವರ್ಗಕ್ಕೆ ಹೋಗುವವರಿದ್ದರೆ ದಾರಿತಪ್ಪಿ ಇಲ್ಲಿಗೆ ಯಾಕೆ ಬಂದಿರಿ?" ಎಂದು ಕೊಂಕಣ್ಣನು ಬರುವನು. ಲಲಿತೆಯೂ ಶ್ರೀಧರನೂ ನಾಚಿದರೊ ಹೆದರಿದರೊ ತಿಳಿಯದು. ಬೆಪ್ಪಾಗಿ ನಿಂತಿರುವರು ಮಾತ್ರ).

ಕೊಂಕಣ್ಣ:— ಇದೇನು, ಶ್ರೀಧರಾ, ಎಲ್ಲರ ತಂದೆಯಾದ ದೇವರ ಕೂಡ ಜಗಳಾಡಲು ಹೊರಟೆಯೊ, ಏನು ನಿನ್ನ ತತ್ವದ ಪ್ರಸಾರಕ್ಕೊಂದು ಪರಲೋಕದ excursionಗೆ ಹೊರಟೆಯೊ?

ಶ್ರೀಧರ:— (ಕೆಳಗೆ ಮುಖ ಮಾಡಿ) ಅಣಕಿಸು, ಹಂಗಿಸು, ಈ ಶ್ರೀಧರನ ಜೀವ ಹಿಂಗಿಸು. ಆದರೆ, ಕೊಂಕಾ, ಇನ್ನು ಈ ಶ್ರೀಧರನಿಗೆ ಜೀವದ ಹಂಗು ಇಲ್ಲ ಎಂಬುದನ್ನು ಮರೆಯ

ಜೀಷ. (ಕಳಕಳಿಯಿಂದ) ಕೊಂಕಾ, ಜೀವದಿಂದಿರುವದು ಯಾಕೆ?

**ಕೊಂಕಣ್ಣ**:— ಸಾಯುವದಕ್ಕೆ ಹೆದರಿ.

ಶ್ರೀಧರ:— (ತಿರಸ್ಕಾರದಿಂದ) ಸಾಯುವದರ ಹೆದರಿಕೆ. ಈ ಶ್ರೀಧರನಿಗಿಲ್ಲ.—ಆದರೆ, ಇಂತಹ ಸಮಾಜದೊಳಗೆ ಇರುವದಕ್ಕೆ ಹೆದರಿಕೆಯೆ ಯಾಕೆ, ನಾಚಿಕೆ ಬರುವದುಂಟು ನಾಚಿಕೆ.

**ಕೊಂಕಣ್ಣ**:— (ಸಂಶಯದಿಂದ) ಏನಾಗಿದೆಯಪ್ಪಾ ಸಮಾಜಕ್ಕೆ?

ಲಲಿತಾ:— (ಮುಂದೆ ಬಂದು ತ್ವೇಷದಿಂದ) ಏನಾಗಿದೆ ಒಡೆದು ಹೇಳಬೇಕೇನೆ?—ಆಗುವದೇನೂ ಉಳಿದಿಲ್ಲ, ಉಳಿದದ್ದರಿಂದ ಏನೂ ಆಗುವಂತಿಲ್ಲ. —ಏನಾಗಿದೆಯಂತೆ! ನಮ್ಮ ಸ್ಥಿತಿಯೆ ಸಾಲದೇನಪ್ಪಾ ಉದಾಹರಣೆಗೆ?

**ಕೊಂಕಣ್ಣ**:— ನಿಮ್ಮ ಉದಾಹರಣೆಯೊಂದು ಬಿಟ್ಟು ಏನೂ ಆಗಿಲ್ಲ ನಮ್ಮ ಸಮಾಜಕ್ಕೆ.

ಶ್ರೀಧರ:— (ಕಳಕಳಿಯಿಂದ) ಅಯ್ಯೋ! ಏನೂ ಆಗಿಲ್ಲವಂತೆ! ಬೆಳೆದರಲ್ಲವೆ ಅದಕ್ಕೆ ಸಮಾಜವೆನ್ನುವದು? ಸಮಾಜದಲ್ಲಿ ಬೆಳೆಯುವದು ಯಾವದು? ತರುಣ ಮನಸ್ಸು, ತರುಣ ಶಕ್ತಿ, ಅಲ್ಲವೆ? ನಮ್ಮಂತಹ ತರುಣರನ್ನು ಬೆಳೆಯುಗೊಡದ ಸಮಾಜವೆಂದರೆ ಅದೊಂದು ತಮಾಷೆ ಅಲ್ಲವೆ? ಸ್ವತಂತ್ರವಿಚಾರ ಬೆಳೆಯಬೇಕಲ್ಲವೆ? ಅದು ಬೆಳೆಯಲು ಅನುವು ಕೊಡಬೇಕಲ್ಲವೆ? Scope ಇಲ್ಲದೆ freedom ಇಲ್ಲ ಎಂಬುದು ತಿಳಿಯಬಾರದೆ?

**ಕೊಂಕಣ್ಣ**:— ಒಂದು ನಿಮಿಷ ಇದನ್ನೆಲ್ಲ ಒಪ್ಪಿಕೊಂಡೆನೆಂದು ತಿಳಿ ಇದನ್ನೆಲ್ಲ ಸರಿಮಾಡುವದಕ್ಕೆ ಸಾಯಬೇಕೆ?

ಲಲಿತಾ:— ಸರಿ ಮಾಡುವದರಲ್ಲಿ ಸತ್ತರೆ ಸ್ವರ್ಗ.

ಶ್ರೀಧರ:— ನಾವು ಸಾಯುವದರಿಂದ ಸರಿಯಾಗುವಂತಿದ್ದರೆ ಶೂರರಂತೆ ಸಾಯಬಾರದೇಕೆ?

**ಕೊಂಕಣ್ಣ**:— ಅಲ್ಲೊ, ಸತ್ತು ಸ್ವರ್ಗಕ್ಕೆ ಹೋದಮೇಲೆ ಇದ್ದಲ್ಲಿ ಏನು ಮಾಡಿದೆಯೆಂದು ಕೇಳಿದರೆ ಏನು ಹೇಳುವೆ?

ಶ್ರೀಧರ:— (ಹೆಮ್ಮೆಯಿಂದ) ನನ್ನ ಉದಾಹರಣೆಯಿಂದ ಉತ್ಸಾಹ ಹುಟ್ಟಿಸಿದೆ ಎಂದು ಹೇಳುವೆ.

**ಕೊಂಕಣ್ಣ**:— ಇಷ್ಟು ಹೇಳುವದಕ್ಕೆ ಮುಂಚಿತ ನಿರುತ್ಸಾಹನಾಗಿ ಸಾಯುವೆಯಲ್ಲವೆ? ಶ್ರೀಧರಾ, ನಿನಗೆ ನಾನು ಎಂದಿನಿಂದಲೊ ಹೇಳಿದೆ, ಜಾತ್ರೆಯ ಮಾತು, ಗೋತ್ರದ ಮಾತು ಬಿಡು ಎಂದು. ಜನರ ಜಾತ್ರೆ ಸೇರಿದಲ್ಲಿ ಮಾತನಾಡಬಾರದು, ಜನರು ಗೋತ್ರ ಕೇಳಿದಲ್ಲಿ ಮಾತನಾಡಬಾರದು; ಎರಡೂ ಸಾಯುವವರೆಗೆ ಕುತ್ತಿಗೆಗೆ ಉರುಲು.— ನನ್ನ ಮಾತು ಕೇಳಲಿಲ್ಲ; ಸಂಘವೆಂದೆ, ಸುಧಾರಣಾ ಎಂದೆ—

**ಲಲಿತಾ**:— (ಸಿಟ್ಟಿನಿಂದ) ಇನ್ನೂ ಹೇಳುವೆ. ಸಂಘ ಬೇಕೇಬೇಕು. ಸಮಾಜ ಸುಧಾರಿಸಲೇ ಬೇಕು. ಅದಕಾಗಿ ನಾವು ಜೀವವನ್ನು ಕೊಡಲೇಬೇಕು.

**ಕೊಂಕಣ್ಣ**:— ನಂನಿಮ್ಮ ಜೀವದಿಂದ ಯಾವ ತಕ್ಕಡಿಯ ತೂಕ ಕೆಳಮೇಲಾಗುವದು? ಸತ್ತ ಮೇಲೆ ಬೇಕಾದ ಮಾತನಾಡಲಿ. ಯಾರೂ ಬೆನ್ನುಹತ್ತಿ ಕೇಳುವದಿಲ್ಲ. ಇರುವವರೆಗೆ ಆಗಲಾರದ್ದನ್ನು ಯಾಕೆ ಮಾತನಾಡಬೇಕು?

ಲಲಿತಾ:— ಕೊಂಕ, ನೀನು ಏನು ಹೇಳಿದರೂ ಅಷ್ಟೆ. ಈ ಹಾಳು

ಸಮಾಜದ ಗೋಳಿಗೆ ಆಹುತಿಯಾದವರು ಎಂದು ತೋರಿಸಲಿಕ್ಕೆ ನಾವು ಸಾಯುವವರೆ.

**ಕೊಂಕಣ್ಣ:**— (ಆಶ್ಚರ್ಯದಿಂದ) ಆಹುತಿ!

**ಲಲಿತಾ:** (ಅಣಕಿಸಿ) "ಆಹುತಿ". ಇನ್ನಾದರೂ ಕಣ್ಣು ತೆರೆ ಯಲಿ ನಿಮ್ಮದು.

**ಶ್ರೀಧರ:**— (ವಿಷಾದದಿಂದ) ಆಹುತಿಯಲ್ಲವೆ? ನಮ್ಮ ಶಕ್ತಿಯು ಆಹುತಿ, ನಮ್ಮ ಸದಿಚ್ಛೆಯು ಆಹುತಿ, ನಮ್ಮ ಪ್ರೇಮದ ಆಹುತಿ. ಕೊಂಕಾ, ನಮ್ಮ ಉದಾಹರಣೆಯನ್ನೆ ನೋಡು. ನಾನು, ಲಲಿತೆ; ಪರಸ್ಪರಪ್ರೇಮ ನಮ್ಮದು. ಆದರೆ— ಆ ಪ್ರೇಮಚಂದ್ರನ ಬೆಳದಿಂಗಳು ಸೂಸಬಾರದಂತೆ ಸಮಾಜದ ಮೇಲೆ!

**ಕೊಂಕಣ್ಣ:**— (ಅವರಿಬ್ಬರನ್ನೂ ಕೆಲಹೊತ್ತು ದಿಟ್ಟಿಸಿ) ಒಟ್ಟಾರೆ ನೀವು ನೀವು ಮದಿವೆ ಆಗಬೇಕೆಂದೊ? ನಿಮ್ಮನ್ನು ತಡೆದವರಾರು?

**ಲಲಿತಾ:**— ಕೇಳು ನಿನ್ನ ಹಾಳುಸಮಾಜಕ್ಕೆ. ಜಾತಿಜಾತಿ ಎಂದು ಮುಖ ತಿರುವಿ ಮೂಲೆ ಹಿಡಿದ ಪಂಡಿತರಿಗೆಯೆ ಕೇಳು.

**ಶ್ರೀಧರ:**— ಸಮಾಜಕ್ಕೆ ಹಿರಿಯರೆಂದೂ, ಹುಡುಗರಿಗೆ ಆದರ್ಶ ರೆಂದೂ, ಮಕ್ಕಳ ಕಲ್ಯಾಣ ಮಾಡುವವರೆಂದೂ ಹೆಸ ರಾದ ನಂನಮ್ಮ ತಂದೆಯರನ್ನೆ ಕೇಳು.

**ಕೊಂಕಣ್ಣ:**— (ಮುಂದೆ ನೋಡಿ) ಕೇಳುವಂತಿದ್ದರೆ ನೀನೇ ಕೇಳು, ಇಲ್ಲಿಯೆ ಬಂದರು.

(ಶ್ರೀಧರನೂ ಲಲಿತೆಯೂ ಆಂ ಎಂದು ಆಶ್ಚರ್ಯಪಡುವಷ್ಟರಲ್ಲಿ ರಾಯರೂ ಲಲಿತೆಯ ತಂದೆಯೂ ಬರುವರು).

**ರಾಯರು:**— (ಆಶ್ಚರ್ಯದಿಂದ) ಎಲ, ನಮ್ಮ ಶ್ರೀಧರ!

ತಂದೆ:— (ಆಶ್ಚರ್ಯದಿಂದ) ಇದೇನು ! ನಮ್ಮ ಲಲಿತಾ !

ಕೊಂಕಣ್ಣ:— (ರಾಯರಿಗೆ) ಇವಳೇ ಲಲಿತಾ, ನಿಮ್ಮ ಶ್ರೀಧರನಿಗೆ ಕೊಡಬೇಕೆಂದ ಹುಡುಗಿ. (ಶ್ರೀಧರನಿಗೆ) ಇವರೇ ಲಲಿತೆಯ ತಂದೆ.—ರಾಯರೆ, ಕ್ಷಮಿಸಿರಿ ನನ್ನನ್ನು. ಏನೊ, ಶ್ರೀಧರ, ಲಲಿತಾ ಇಬ್ಬರೂ ನನ್ನ ಕೂಡ ಕಲಿತವರೆಂದು ಕಂಡುಬಾ—

ರಾಯರು:— ಏನೂ ಅಡ್ಡಿ ಇಲ್ಲ; ಅವಸರದಲ್ಲಿ ಶ್ರೀಧರನಿಗೆ ಕನ್ಯಾ ತೋರಿಸುವದು ಆಗಿದ್ದಿಲ್ಲ ನಮಗಾದರೂ.

ತಂದೆ:— ರಾಯರೆ, ನಡೆಯಿರಿನ್ನು. ಕೂಡಿಬಂದ ಕಾಲದಂತಹ ಮುಹೂರ್ತ ಬೇಡಿದರೂ ಸಿಕ್ಕುವದಿಲ್ಲ. (ಹೊರಡುವರು).

ರಾಯರು:— (ಹೋಗುವಾಗ್ಗೆ) ಕೊಂಕಣ್ಣಾ, ಎರಡೂ ಮನೆಗಳ ಪುರೋಹಿತ ನೀನು. ಜೋಕೆ.

(ಇಬ್ಬರು ಹಿರಿಯರೂ ನಗುತ್ತ ಹೋಗುವರು).

ಶ್ರೀಧರ:— (ಒಮ್ಮೆಲೆ) ಕೊಂಕಾ, ನೀಚನಿರುವೆ ನೀನು.

ಕೊಂಕಣ್ಣ:— (ತಲೆತೂಗುತ್ತ) ನಿಜ. ಇದುವರೆಗೆ ಮದಿವೆ ಮಾಡಲಿಲ್ಲವೆಂದು ಸಮಾಜ ನೀಚವಾಯ್ತು; ಈಗ್ಗೆ ಮದಿವೆ ಮಾಡಿದೆನೆಂದು ಈ ಕೊಂಕ ನೀಚನಾದ. ಅಂತೂ ಯಾರಿಗಾದರೊಬ್ಬರಿಗೆ ನೀಚ ಎನ್ನುವದು ನಿಮ್ಮ ಸಂಘದ ನಿಯಮವೆಂದು ಕಾಣುವದು.

ಲಲಿತಾ:— (ಸಿಟ್ಟಿನ ನೋಟದಿಂದ) ಇದೇನೊ ಕೊಂಕ, ಮಂದಿಯ ಮದಿವೆಯೆಲ್ಲ ನಿನ್ನ ಕಯ್ಯೊಳಗೆಯೆ ಇದ್ದ ಹಾಗೆ ಮಾತನಾಡುವೆಯಲ್ಲ.

**ಕೊಂಕಣ್ಣ:** - ಓಹೊ, ತಪ್ಪಾಯ್ತು; ನಿಮ್ಮ ಮದಿವೆ ನಿಂನಿಮ್ಮ ಕಯ್ಗೊಳಗೆ, ಅಲ್ಲವೆ? (ಶ್ರೀಧರ ಮತ್ತು ಲಲಿತೆಯರ ಕೈಗೂಡಿಸಿ) ಲಲಿತಾ, ಮೇಲಿನ ಅರುಂಧತಿಯನ್ನು ನೋಡು ನೀನು; ಶ್ರೀಧರಾ, ಅಲ್ಲಿಯವರೆಗೆ ಕಣ್ಣುಮುಚ್ಚು ನೀನು. ಎರಡನೆಯ ಹೆಂಗಸರನ್ನು ನೋಡೀ ಮತ್ತೆ ಕಣ್ಣೆತ್ತಿ.

ಶ್ರೀಧರ. - ಕೊಂಕಾ, ನಮ್ಮನ್ನು ಹುಚ್ಚು ಮಾಡಬೇಕೆಂದು ಆಟ ಹೂಡಿದೆಯಲ್ಲವೆ?

**ಕೊಂಕಣ್ಣ:** – (ಗಂಭೀರವಾಗಿ) ಜಗತ್ತೇ ಹುಚ್ಚಾಟವಿದೆ. (ಶ್ರೀಧರನಿಗೆ) ಶ್ರೀಧರಾ ಇನ್ನುಮೇಲೆ ಈ ಹೊಸ ಸಂಘಕ್ಕೆ ನೀವಿಬ್ಬರೂ ಮುಂಬರರು. ಈ ಸಂಘದಿಂದ ಹೊಸ ಸಮಾಜವನ್ನೆ ಹುಟ್ಟಿಸಬೇಕು ನೋಡು.

**ಲಲಿತಾ:**— (ಸಿಟ್ಟಿನಿಂದ) ಸಾಕು, ಇದು ನಿನ್ನ ತತ್ವವೇನು?

**ಕೊಂಕಣ್ಣ:** – ನಾನು ತತ್ವದವನಲ್ಲ, ತಪಸ್ಸಿನವನು.

**ಲಲಿತಾ:** — (ನಕ್ಕು) ಅಮ್ಮಯ್ಯಾ, ಕೊಂಕ ಇನ್ನು ಗಡ್ಡ ಬೆಳೆಯಿಸುವನೇನೆ!

**ಕೊಂಕಣ್ಣ:**— (ಗಂಭೀರವಾಗಿ) ತಪಸ್ಸು ಬೇರೆ, ಗಡ್ಡ ಬೇರೆ; ತಪಸ್ಸು ಕಾರಣ, ಗಡ್ಡ ಕಾರ್ಯ.

ಶ್ರೀಧರ:— (ನಗುತ್ತ) ಋಷಿಯಾದ ಮೇಲೆ ವೇದಾಂತ ಹೇಳುವೆಯಂತೆ. ತಪಸ್ಸು ಮಾಡುವ ಬುದ್ಧಿ ಯಾಕೆ ಬಂದಿತು?

**ಲಲಿತಾ** — ಅವನಿಗೆ ಗೊತ್ತಾದರೂ ಇದೆಯೊ ಇಲ್ಲವೊ ತಪಸ್ಸು ಎಂದರೆ ಏನೆಂಬುದು? ತಪಸ್ಸು ಅಂದರೆ ಕೆಲಸ ತಪ್ಪಿಸು ಎಂದು ಅವನ ಆಶೆ.

**ಕೊಂಕಣ್ಣ**:— (ನಕ್ಕು) ತಪಸ್ಸು ಎಂದರೆ ನನಗೆ ಗೊತ್ತಿಲ್ಲವೆ? ಉದ್ದರಿ ವಸೂಲ ಮಾಡುವ ಮಾರವಾಡಿಯು ಹಾಗೆ ದೇವರ ಬಾಗಿಲಿಗೆ ಕುಳಿತುಬಿಡುವದು.—ಇನ್ನೊಂದು: ಹೊಟ್ಟೆಗಿಲ್ಲದೆ ಉಪವಾಸ ಬಿದ್ದರೆ ದರಿದ್ರ ಎಂದು ಉಗುಳುವರು; ತಪಸ್ಸು ಎಂದು ಉಪವಾಸ ಬಿದ್ದರೆ ಬ್ರಾಹ್ಮಣ ಎಂದು ಹೊಗಳುವರು.

**ಲಲಿತಾ**:— ದೇವರ ಬಾಗಿಲಿಗೆ ನಿಂತು ಬೇಡಿದರೆ, ದರಿದ್ರಬ್ರಾಹ್ಮಣ ಎಂದು ಬೊಗಳುವರು.

**ಶ್ರೀಧರ**:— ಏನೇ ಇರಲಿ, ದರಿದ್ರ ಬೇರೆ, ಬ್ರಾಹ್ಮಣ ಬೇರೆ ಎನ್ನುವದೊಂದು ಹೊಸ ವಿಚಾರವೆ. ಆಗಲಿ, ನೀನು ಬೇಡುವದೇನು?

**ಕೊಂಕಣ್ಣ**:— ನಾನು ಬೇಡುವದು ನಿಮಗಾಗಿ. ಬ್ರಹ್ಮ, ವಿಷ್ಣು, ಶಿವ, ಸರಸ್ವತಿ ಈ ನಾಲ್ಕು ದೇವರನ್ನು ಒಲಿಸುವದು ನನ್ನ ತಪಸ್ಸು.

**ಲಲಿತಾ**:— ಸರಸ್ವತಿಗೇನು, ಮುಂದಿನ ಜನ್ಮದಲ್ಲಿಯಾದರೂ ಕೃಪೆ ಮಾಡು ಎಂದು ಬೇಡುವೆಯಾ?

**ಕೊಂಕಣ್ಣ**:— ನನ್ನ ಸಲುವಾಗಿ ಬೇಡುವದಿಲ್ಲವೆ ಇಲ್ಲ ಎಂದು ಹೇಳಲಿಲ್ಲವೆ? ಸರಸ್ವತಿಗೆ ಹೀಗೆ ಹೇಳುವೆ:—

"ದೇವೀ, ಸರಸ್ವತಿ, ನೀನು ದೇವಲೋಕದವಳು. ಆದರೂ ಭೂಲೋಕಕ್ಕೆ ಬಂದಾಗ್ಗೆ, ಭರತವರ್ಷಕ್ಕೆ ಬಂದಾಗ್ಗೆ, ನಿನ್ನ ನಡತೆಯು ಸರಿಯಾಗಿಲ್ಲವೆಂದು ಆರೋಪಣೆ ಇದೆ ನಿನ್ನ ಮೇಲೆ. ನೀನು ದೇವತೆಯಾದರೂ ಹೆಣ್ಣುಮಗಳಲ್ಲವೆ? ಈ ಆರ್ಯಭೂಮಿಯಲ್ಲಿ

ಬಂದೆಯೆಂದರೆ ಆರ್ಯಸ್ತ್ರೀಯರಂತೆಯೆ ನಡೆಯಬೇಕ ಲ್ಲವೆ? ಆದನ್ನೆಲ್ಲ ಬಿಟ್ಟುಕೊಟ್ಟು ಮಾನವಿಲ್ಲದೆ, ಮರ್ಯಾದೆಯಿಲ್ಲದೆ, ಕೇವಲ ಗಂಡಸರ ಸಹವಾಸದಲ್ಲಿಯೆ ಇರುವೆಯಂತೆ! ಹೀಗೆಯೆ ಗಂಡು–ರಾಮೆಯಂತೆ ನಡೆದೆಯೆಂದರೆ ಆರ್ಯಸ್ತ್ರೀಯರ ಸಹವಾಸದಲ್ಲಿ ನಿನಗೆ ಎಂದಿಗೂ ಪ್ರವೇಶ ದೊರೆಯಲಿಕ್ಕಿಲ್ಲ; ಕಾರಣ ಎಚ್ಚರಿಕೆ—

ಶ್ರೀಧರ:— ಆಲ್ಲೊ—

**ಕೊಂಕಣ್ಣ**:— ಇನ್ನೂ ತಾಜಾ ಕಲವು—post scriptum—ಇದೆ, ಕೇಳು. " ಇದಲ್ಲದೆ ನಮ್ಮ ಹೆಂಗಸರು ಬೇಡಿದಾಗೆಲ್ಲ ವರವನ್ನು ಕೊಡು ಎಂದರೆ ವರನನ್ನು ಕೊಟ್ಟು ಓಡಿ ಹೋಗುವೆಯಂತೆ."

**ಲಲಿತಾ**:— (ಅಸೂಯೆಯಿಂದ) ಸಾಕು, ಬಹಳ ಬುದ್ಧಿವಂತ ಗಂ[illegible] ನೀನು.

ಶ್ರೀಧರ:— ಆದಿರಲಿ, ಕೊಂಕ; ಸರಸ್ವತಿಯಂತಹ ಕ[illegible]ಗಳ ಕೂಡ ಹೀಗೆ ಮಾತನಾಡುವ ನೀನು ಬ್ರ[illegible] ಕೂಡ ಬೈದಾಡುವೆಯೇನೊ?

**ಕೊಂಕಣ್ಣ**:— ಬ್ರಹ್ಮನಿಗೆ ಹೇಳುವದು ಕಷ್ಟ; ಅವನೇನೊ ಪಿತಾಮುಹಾ ಅಂತೆ! ಎಲ್ಲಿ ಕಿವುಡು ಆಗಿರುವನೊ ಎಂಬ ಹೆದರಿಕೆ. ಬ್ರಹ್ಮನಿಗೆ ಏನು ಹೇಳುವೆ ಗೊತ್ತಿದೆಯೆ?

" ಪಿತಾಮುಹಾ, ಉಳಿದ ಧರ್ಮದೊಳಗಿನ ಸೃಷ್ಟಿ-ಕರ್ತರು ವಾರಕ್ಕೊಮ್ಮೆ ವಿಶ್ರಾಂತಿ ಪಡೆಯುವರಂತೆ. ದಯಮಾಡಿ ನೀನಾದರೂ ಕೊಂಚ ದಿವಸ ವಿಶ್ರಾಂತಿ

ಪಡೆದು ನಮ್ಮ ದೇಶದೊಳಗಿನ ಸೃಷ್ಟಿನಿರ್ಮಾಣ ತಡೆಯು ಬೇಕು ಎಂದು ವಿನಂತಿ ನಿನಗೆ. ಇದಲ್ಲದೆ ನಮ್ಮ ಸ್ವರ್ಗದ serviceನಲ್ಲಿ ಮೊದಲು ಸೇರಿದವನೆಂದರೆ ನೀನು; ಕಾರಣ ನೀನು retire ಆಗತಕ್ಕದ್ದು. ಅದಾಗದಿದ್ದರೆ ಕೆಲವು ದಿವಸ ರಜೆಯ ಮೇಲಂತೂ ಹೋಗಲೇಬೇಕು. ಒಂದು ವೇಳೆ ನಿನ್ನ ದೊಡ್ಡ ಸಂಸಾರ pensionದ ಮೇಲೆ ಸಾಗಲಿಲ್ಲವೆಂದರೆ ನಮ್ಮ ದೇಶದ ಉದ್ಯೋಗ-ವ್ಯವಸಾಯ ಇಲ್ಲವೆ ಒಕ್ಕಲತನದ departmentಗೆ transfer ಅಂದರೆ ಬದಲು ಮಾಡಬಹುದು. ಇದಲ್ಲದೆ ನೀನು ಇದ್ದ ಹುದ್ದೆಯೊಳಗೆ ಬಡವರ ಮೇಲೆಯೆ ಪಕ್ಷಪಾತ ಮಾಡಿರುವೆ ಎಂದು ಆರೋಪಣೆ ಇದೆ. ಕಾರಣ ನೀನು retire ಆಗುವದೇ ಹೆಚ್ಚು ಹಿತಕರ".

**ಲಲಿತಾ:—** ಬ್ರಹ್ಮ retire ಆದರೆ ನಮ್ಮ ಕೊಂಕ ಹೋಗುವನೇನು ಆತನ ಜಾಗೆಯಲ್ಲಿ ಪರಬ್ರಹ್ಮ!

**ಶ್ರೀಧರ:—** ಕೊಂಕಾ, ನೀನು ಬೇಡುವದರಲ್ಲಿ ಏನೊ ಅರ್ಥವಿದೆಯೆಂದು ನನ್ನ ಸಂಶಯ.

**ಕೊಂಕಣ್ಣ:—** ಸಂಶಯ ಬರುವದು ಬುದ್ಧಿಯ ಮೊದಲನೆಯ ಲಕ್ಷಣ.

**ಲಲಿತಾ:—** ನಿನ್ನಂತಹ ಬುದ್ಧಿ ಇರುವದೆಂದರೆ ಅದೊಂದು ಅವಲಕ್ಷಣ. ಸಾಯುವವರೆಗೆ ನೀನು ಹೀಗೆಯೆ ಎರಡನೆಯವರಿಗೆ ಬಾಯಿ ಬಿಡತಾನೆಯೆ ಸಾಯುವೆ!

**ಕೊಂಕಣ್ಣ:—** ( ನಕ್ಕು ) ಅದರ ಚಿಂತೆ ಬೇಡ ನಿನಗೆ. ಎರಡನೆಯವರು ನನ್ನನ್ನು ನೋಡಿ ಬಾಯಿ ಬಿಡುವ ಹಾಗೆ ಮಾಡುವೆ.

ಶ್ರೀಧರಾ, ನಡ-ನಡುವೆ ಇಂದ್ರಪದವಿಗೆಂದು ತಪಸ್ಸು ಮಾಡುವೆ.

ಶ್ರೀಧರ.— ಇದೇನು ಮತ್ತೆ !

**ಕೊಂಕಣ್ಣ**:— ಗೊತ್ತಿಲ್ಲವೆ ನಿನಗೆ ? ಇಂದ್ರನೆಂದರೆ ಸ್ವರ್ಗದಲ್ಲಿ ಮ್ಯುನಿಸಿಪಾಲಿಟಿ ಪ್ರಸಿಡೆಂಟ ಇದ್ದ ಹಾಗೆ. ಒಮ್ಮೆ ಆರಿಸಿ ಬಂದ ಮೇಲೆ ಸಾಯುವವರೆಗೆ ಬಿಟ್ಟು ಹೋಗಬಾರದೆಂಬ ದುರಾಶೆ. ಇಂದ್ರಪದವಿಗೆ ತಪಸ್ಸು ಮಾಡಿದೆನೆಂದರೆ ಸಾಕು, ಇಂದ್ರನಿಗೆ ಹೆದರಿಕೆ. ತಪಸ್ಸು ಕೆಡಿಸುವ ಹಂಚಿಕೆ. ನನಗೇನು ? ಯಾವರೀತಿಯಿಂದಾದರೂ ನಡ–ನಡುವೆ ರಂಭಾ–ಊರ್ವಶಿ ಮುಂತಾದ ಸ್ವರ್ಗಸುಖ ಸಿಕ್ಕರೆ ಸಾಕು. ಕುಲ–ಕೆಟ್ಟು ಸುಖ ಪಡಬೇಕು ಎಂದು ಹೇಳಿಲ್ಲವೆ ?

**ಲಲಿತಾ**:— (ಸಿಟ್ಟಿನಿಂದ) ಹೀಗೆ ನೀ ಕೆಟ್ಟು ಮಾತನಾಡಿದರೆ ಅಸಹ್ಯ ಬರುವದು ನೋಡು ನನಗೆ. ಗಂಡಸು ಆದ ಮಾತಿಗೆ ನಾಚಿಕೆ ಬೇಡವೇನು ?

**ಕೊಂಕಣ್ಣ**:— ಬ್ರಹ್ಮನಿಗೆ ಇಂದ್ರನಿಗೆ ನಾಚಿಕೆಯು ಆಣೆ ಹಾಕುವದೆಂದರೆ ನಾಚಿಕೆಗೇಡಿತನದ ಧೈರ್ಯ ನೋಡು, ಲಲಿತಾ. ಮಾಡಿದ ತಪ್ಪು ಮುಚ್ಚಿಕೊಳ್ಳುವವರಿಗೆ ನಾಚಿಕೆ.

**ಲಲಿತಾ**:— (ಮೊದಲಿನಂತೆ) ನಾಲಗೆ ಇದ್ದರೆ ನಾಚಿಕೆ ಅಲ್ಲವೆ ?

**ಕೊಂಕಣ್ಣ**:— ಕೇವಲ ನಿಜ. ಮನುಷ್ಯನಿಗೆ ನಾಲಗೆ ಹುಟ್ಟಿದ ದಿನ ನಾಚಿಕೆ ಎಂಬ ಶಬ್ದ ಹುಟ್ಟಿತು. ನಾಚಿಕೆ ಮರೆಮಾಚಿಕೆ. (ನಕ್ಕು) ಲಲಿತಾ, ಯಾವ ಪಾಪಕ್ಕಾಗಿಯೊ ಮನುಷ್ಯನಾಗಿ ಹುಟ್ಟಿದುದನ್ನು ಹೇಳುವದಕ್ಕೆ ನಾಚಿಕೆ. ದೇವರ

ಮನೆಯೊಳಗೆ ನಾಚಿಕೆ ಎಂಬುವ ವಸ್ತುವಿಲ್ಲ. ದೇವರಿಗೆ ನಾಚಿಕೆಯಿದ್ದರೆ ಯುಗಯುಗಕ್ಕೊಮ್ಮೆ ಹುಟ್ಟಿಸುತ್ತಿದ್ದನೆ ನಮ್ಮ ನಿಮ್ಮಂತಹ ಮಾದರಿಗಳನ್ನು? ಆದೇಕೆ? ನಾಚಿಕೆಯಿದ್ದರೆ ಕೃಷ್ಣಾವತಾರದ ಕತೆಯೆ ಹೇಳುವ ಹಾಗಿಲ್ಲ.

**ಶ್ರೀಧರ:**— (ಕೈಮುಗಿದು) ಮಹಾಶಯ, ಕೇಳಿದವರಿಗೆ ನಾಚಿಕೆ ಹುಟ್ಟಿಸುವ ತಮ್ಮ ಲೆಕ್ಚರು ಸಾಕುಮಾಡಿರಿ; ನಾಚಿಕೆ ಬಿಟ್ಟು ತಮ್ಮ ತಪಸ್ಸಿನ ಕತೆ ಮುಂದೆ ಸಾಗಲಿ.

**ಕೊಂಕಣ್ಣ:**— (ನಕ್ಕು) ಯಾಕೆ?

**ಲಲಿತಾ:**— ವಿಷ್ಣುವಿನ ಮುಂದೆ ತಾವೇನು 'ಶಿವಶಿವಾ' ಎನ್ನುವಿರಿ ಕೇಳಬೇಕಾಗಿದೆ.

**ಕೊಂಕಣ್ಣ:**— (ಸ್ಮರಣೆಗೆ ಬಂದಂತೆ) ಓಹೊ, ನನ್ನ ತಪಸ್ಸಿನ ಲಿಸ್ಟಿನಲ್ಲಿ ವಿಷ್ಣುಮಹಾಶಯನೊಬ್ಬನಿರುವನಲ್ಲವೆ? ಆತನಿಗೇನು ಬೇಡುವದು? ಕೈಲಾಗದ ಗಂಡಸು. ಮನೆಯೊಳಗೆ ಹೆಂಡತಿಯ ಕಾಟ ತಪ್ಪಿಸಿಕೊಳ್ಳುವದಕ್ಕಾಗಿ 'ಅವತಾರ' ಎಂದು ಭೂಮಿಗೆ ಓಡಿ ಬರುವ. ನೋಡಬಾರದೆ? ವಿಷ್ಣು ಹುಟ್ಟಿದನು ನಮ್ಮ ದೇಶದೊಳಗೆ; ಹೋದ ಹೋದಲ್ಲೆಲ್ಲ ಧರ್ಮಶಾಲೆಯ ಹಾಗೆ ಗುಡಿಗಳನ್ನು ಕಟ್ಟಿಸಿ ದಿನಾಲು ಬಾಯಿಗೆ ನೀರು ತರುವ ಅನ್ನ ಉಣ್ಣಿಸುವೆವು. ಆದರೇನು ಈಗಿನ ಹುಡುಗರ ಹಾಗೆ ಹೆಂಡತಿಯ ಕೈಚಂಡು. ಇಲ್ಲಿ ನಾವು ಇಷ್ಟೊಂದು ಕಷ್ಟಪಟ್ಟರೂ ನಮ್ಮ ಕೈನೆರವು ಆಗುವ ಹಾಗೆ ದುಡಿಯಲಿಕ್ಕೆ ಕರೆಯಿಸಬೇಕು ತನ್ನ ಲಕ್ಷ್ಮಿಯನ್ನು? ಮುದುಕ

ಅತ್ತೆ ಮೂವಂದಿರಿಗೆ ಉಸಿರುಹತ್ತಿದಾಗ್ಗೆ ಸೊಸೆಯು ಹವೆ ತಿನ್ನಲಿಕ್ಕೆ ಹೋದಳಂತೆ! ಹಾಗೆ, ನಾವು ಕಷ್ಟ ಪಡುವಾಗ್ಗೆ ತನ್ನ ಹೆಂಡತಿಯನ್ನು ಪರ-ಊರಿಗೆ—ಪರದೇಶಕ್ಕೆ ಕಳುಹಿಸಿರುವ.

**ಲಲಿತಾ:—** (ಗಟ್ಟಿಯಾಗಿ ನಕ್ಕು) ಕೊಂಕಣ್ಣಾ, ನೀನು ಎಲ್ಲಿಯಾದರೂ ನಾಟಕದಲ್ಲಿ ಸೇರಿಬಿಡು. ಹೊರಗೆ ಇಂತಹ ಮಾತ ನಾಡಿದೆಯೆಂದರೆ—

**ಕೊಂಕಣ್ಣ:—** ಅಯ್ಯೋ, ನನ್ನನ್ನು ನಾಟಕದಲ್ಲಿ ಕರೆದುಕೊಳ್ಳುವ ಕಾಲಿ ದಾಸ ಇದ್ದಾನೆಯೆ ಕರ್ನಾಟಕದೊಳಗೆ? ಅದಕಾಗಿ ನಾಟಕದ ಅಧಿಷ್ಠಾನದೇವನಾದ ಶಿವನಿಗೆ ಬೇಡಿಕೊಳ್ಳುವೆ:—

"ಶಿವಶಿವಾ, ನಮ್ಮ ಕಲೆಗಳ ತಂದೆಯೆ, ನಿನ್ನ ಮಗನಾದ ಗಣೇಶನನ್ನು ಕೊಂಚ ಹೆದರಿಸಬಾರದೆ? ಅವನನ್ನೇನೊ ಸ್ಕೂಲ್ ಇನ್ಸ್ಪೆಕ್ಟರನಂತೆ ವಿದ್ಯಾಖಾತೆಗೆ ಅಧಿಕಾರಿ ಮಾಡಿ ಕಳುಹಿಸಿಬಿಟ್ಟೆ. ಅದಕ್ಕೂ ಮುಂಚಿತವಾಗಿ ಅವನಿಗೊಂದು ಪಶುಗಳೊಳಗೆ ಮಿಗಿಲಾದ ಪಶುವಿನ ತಲೆಯನ್ನು ಕೊಟ್ಟೆ. ಅದೂ ಹೋಗಲಿ; ನಿನ್ನ ಮಗನು touringಕ್ಕೆ ಹೊರಟರೆ ಅದೇನು ಪೇಚಾಟ! ಅವನ ವಾಹನವಾದ ಇಲಿಯೊ, ಜನರಿಗೆ ಪ್ರಾಣಸಂಕಟ. ದಯಮಾಡಿ ನಿನ್ನ ಮಗನಿಗೆ ಸರಿಯಾದ ನಡಾವಳಿ—ನಾಲ್ಕು mannersಉ ಕಲಿಸಿ, ವರ್ಷದಲ್ಲಿ ೫ ದಿವಸ ಬಂದು ನಮ್ಮ ದುಡ್ಡನ್ನೆಲ್ಲ ಬಳೆದುಕೊಂಡು ಹೋಗುವದಕ್ಕಿಂತ—ತನ್ನ ಆನೆಯನ್ನು ಮಠಕ್ಕೆ, ಇಲಿಯನ್ನು